पूर्णप्रज्ञसंशोधनमन्दिरम्
नवदेहलीस्थमानवसंसाधनविकासमन्त्रालयाधीन-
राष्ट्रियसंस्कृतसंस्थानेन सम्मानितम्

श्रीकृष्णावधूतविरचिता

# याज्ञीयोपनिषत्प्रभा

सम्पादकौ
डा. ए.वि. नागसम्पिगे
विद्वान् पि.वि. उपाध्यायः

पूर्णप्रज्ञसंशोधनमन्दिरम्
पूर्णप्रज्ञविद्यापीठम्, बेङ्गलूरु - २८
२००४

पूर्णप्रज्ञसंशोधनमन्दिरम्
नवदेहलीस्थमानवसंसाधनविकासमन्त्रालयाधीन-
राष्ट्रियसंस्कृतसंस्थानेन सम्मानितम्

श्रीकृष्णावधूतविरचिता

# याज्ञीयोपनिषत्प्रभा

सम्पादकौ
डा. ए.वि. नागसम्पिगे
विद्वान् पि.वि. उपाध्यायः

पूर्णप्रज्ञसंशोधनमन्दिरम्
पूर्णप्रज्ञविद्यापीठम्, बेङ्गलूरु - २८
२००४

*पूर्णप्रज्ञसंशोधनमन्दिरग्रन्थमाला - १८*

**याज्ञीयोपनिषत्प्रभा**

**श्रीकृष्णावधूतविरचिता**

सम्पादकौ- डा. ए.वि. नागसम्पिगे तथा विद्वान् पि.वि. उपाध्यायः

प्रकाशकः -

पूर्णप्रज्ञसंशोधनमन्दिरम्

पूर्णप्रज्ञविद्यापीठम्, कत्तरिगुप्पा मेन्रोड्,

बेङ्गलूरु - २८

प्रथममुद्रणम् - २००४

मुद्रितपुस्तकसङ्ख्या - १०००

मूल्यम् - २० रूप्यकाणि

अक्षरसंयोजनम् - रम्या क्रियेशन्स्, बेङ्गलूरु.

लावण्यमुद्रणद्वारा मुद्रितम् ।

**POORNAPRAJNA SAMSHODHANA MANDIRAM**
Recognised by Rashtriya Sanskrit Samsthan, Deemed University, Ministry of H.R.D., Govt. of India, New Delhi

# Yājñīyopanishatprabhā

**of Śri Kṛshṇāvadhūta**

*Editors*

**Dr. A.V. Nagasampige**
and
**Vidwan P.V. Upadhyaya**

*Publisher :*

**Poornaprajna Samshodhana Mandiram**
**Poornaprajna Vidyapeetha,**
**Bangalore - 560 028**

**2004**

Poornaprajna Samshodhana Mandiram Series No. 18

# Yājñīyopanishatprabhā

**of Śri Kṛshṇāvadhūta**

*Editors* : **Dr. A.V. Nagasampige and Vidwan P.V. Upadhyaya**

*Published by* :.
**Poornaprajna Samshodhana Mandiram**
Poornaprajna Vidyapeetha, Bangalore - 560 028.

First Edition : 2004

Copies : 1000

Price : Rs. 20/-

*Type setting* :
**Ramya Creations**, Bangalore

*Printed by* :
**Lavanya Mudrana**, Bangalore.

श्रीश्रीविश्वेशतीर्थश्रीपादाः

श्रीपेजावराधोक्षजमठः, रजतपीठपुरम्

# अनुग्रहसन्देशः

सकलेन्द्रियमनोवृत्तिभिः भगवति निरूढभावस्य स्वायम्भुवस्य मनोः भक्षणार्थं पुण्यजनाः प्रायतन्त । तदा भगवान् सर्वगो यज्ञः यातुधानान् संहृत्य भक्ताग्रेसरं मनुं ररक्षेति भागवती कथा। समाध्यवस्थायां मनुदृष्टाः मन्त्रा एव याज्ञीयोपनिषच्छब्देन व्यपदिश्यन्त इति विदितमेव विदुषां समेषामपि ।

न केवलं मनुरथ तद्वंशजाः सर्वे मनुजा अपि यातुधानैराक्रान्ताः सन्त्यनन्ताः । तेषां विमुक्तिश्च पुण्यजनैः भगवत्प्रसादैकसाध्या । प्रसादश्च ध्यानसाध्यः । ध्यानं च निर्णीततत्त्वस्येति भगवत्स्वरूपविविदिषूणां सतामनुग्रहार्थं तत्त्वज्ञानप्रदानार्थं च प्रवृत्तेयमुपनिषत् सकलसुजनानाममन्दमानन्दमातन्वती सर्वकालाध्येयेत्यविप्रतिपन्नोऽर्थः । सेयमुपनिषत् श्रीकृष्णावधूतप्रणीताऽप्रकाशिताऽपूर्वप्रभाव्याख्यया समलङ्कृता प्रकाशितेति महदिदं प्रमोदस्थानम् ।

श्रीकृष्णावधूतप्रणीताः नैके शास्त्रग्रन्था अद्यापि विदुषां

दृष्टिगोचराः । तथापि महता प्रयत्नेन तैः प्रणीता ग्रन्थाः केचनास्माभिः सङ्गृहीताः संरक्षिताः प्रकाश्यन्त इति तोषाय केवलं विदुषां निवेद्यते । इयं च याज्ञीयोपनिषत्प्रभा श्रीमध्वभाष्य-टीकाभावाविष्करणपटीयसी अपव्याख्याननिराकरणक्षमा च विराजते । अस्या अध्ययनेन विद्वांसः विद्यार्थिनश्च स्वीयां प्रज्ञामभिवर्धयन्त्वित्याशास्महे । ग्रन्थस्यास्य शोधकयोरस्मत्प्रिय-शिष्ययोः डा. ए.वि. नागसम्पिगे पि.वि. उपाध्याय इत्येतयोः श्रीकृष्णानुग्रहततीराशास्महे ।

*इति नारायणस्मृतयः*

**श्रीविश्वेशतीर्थश्रीपादाः**

# ಯಾಜ್ಞೀಯೋಪನಿಷತ್‌ಪ್ರಭಾ

ಹತ್ತೊಂಭತ್ತನೆಯ ಶತಕದ ಸಕಲಶಾಸ್ತ್ರಪಾರಂಗತ ವಿದ್ವಾಂಸರು ಶ್ರೀಕೃಷ್ಣಾವಧೂತರು. ಷಡ್‌ದರ್ಶನಗಳಿಗೆ ಅವರು ನೀಡಿದ ಕಾಣಿಕೆ ಅಪೂರ್ವ ಹಾಗೂ ಅವಿಸ್ಮರಣೀಯ. ಅವರು ಹತ್ತು ಉಪನಿಷತ್ತುಗಳಿಗೆ ಭಾಷ್ಯ-ಟೀಕಾರ್ಥ ಸಂಗ್ರಾಹಕವಾದ ಪರಮತವಿಮರ್ಶಪೂರ್ವಕವಾದ ಕೃತಿಗಳನ್ನು ರಚಿಸಿದ್ದಾರೆ. ಅವರ ಅನೇಕ ಕೃತಿಗಳು ಕೇವಲ ನಾಮಾವಶೇಷವಾಗಿದ್ದಾವೆ. ಪ್ರಕೃತ ಈ ಕೃತಿ ಪರಮಪೂಜ್ಯ ಗುರುಗಳಾದ ಶ್ರೀವಿಶ್ವೇಶತೀರ್ಥ ಶ್ರೀಪಾದರ ಆದೇಶದಂತೆ ವಿದ್ವಾಂಸರ ಕೈಸೇರುತ್ತಿದೆ. ಈ ವ್ಯಾಖ್ಯಾನದ ಒಂದೆರಡು ವೈಶಿಷ್ಟ್ಯಾಂಶಗಳನ್ನು ಮುಂದೆ ನಿರೂಪಿಸುತ್ತೇವೆ.

## ಉಪನಿಷತ್ತಿನ ಹಿನ್ನೆಲೆ

ಸ್ವಾಯಂಭುವ ಮನು ಮತ್ತು ಶತರೂಪಾದೇವಿಯ ಮಗಳು ಆಕೂತಿ. ಅವಳು ರುಚಿಪ್ರಜಾಪತಿಯ ಮಡದಿ. ಇವರ ತಪಸ್ಸಿನಿಂದ ಒಲಿದ ರಮಾ-ನಾರಾಯಣರು ಮಕ್ಕಳಾಗಿ ಧರೆಗಿಳಿದರು. ಜಗದ ಈ ಆದಿಮೂರ್ತಿಗಳನ್ನು 'ಯಜ್ಞ-ದಕ್ಷಿಣಾ' ಎಂದು ಕರೆದರು. ಈ ಯಜ್ಞನಾಮಕ ಭಗವಂತನು ಮಾತಾಮಹನಾದ (ತಾಯಿಯ ತಂದೆಯಾದ) ಸ್ವಾಯಂಭುವ ಮನು ಮಹಾರಾಜನಲ್ಲಿ ಬೆಳೆದನು. ಹುಟ್ಟಲಿರುವ ಗಂಡುಮಗುವನ್ನು ತನಗೆ ನೀಡಬೇಕೆಂಬ ಬೇಡಿಕೆಯೊಂದಿಗೆ ಮನು ರುಚಿ-ಪ್ರಜಾಪತಿಗಳಿಗೆ ಮಗಳನ್ನಿತ್ತಿದ್ದ. ನಾರಾಯಣ ಇವರ ಮಗನಾಗುವುದು ಅವನಿಗೆ ತಿಳಿದಿತ್ತು.

**ಮನೋಸ್ತು ಶತರೂಪಾಯಾಂ ತಿಸ್ರಃ ಕನ್ಯಾಃ ಪ್ರಜಜ್ಞಿರೇ ।**
**ಆಕೂತಿರ್ದೇವಹೂತಿಶ್ಚ ಪ್ರಸೂತಿರಿತಿ ವಿಶ್ರುತಾಃ ॥**
**ಆಕೂತಿಂ ರುಚಯೇ ಪ್ರಾದಾತ್ ಅಪಿ ಭ್ರಾತೃಮತೀಂ ನೃಪಃ ।**
**ಪುತ್ರಿಕಾಧರ್ಮಮಾಶ್ರಿತ್ಯ ಶತರೂಪಾನುಮೋದಿತಃ ॥**
**ಪ್ರಜಾಪತಿಃ ಸ ಭಗವಾನ್ ರುಚಿಸ್ತಸ್ಯಾಮಜೀಜನತ್ ।**
**ಮಿಥುನಂ ಬ್ರಹ್ಮವರ್ಚಸ್ವೀ ಪರಮೇಣ ಸಮಾಧಿನಾ ॥**

**ಯಸ್ತಯೋಃ ಪುರುಷಃ ಸಾಕ್ಷಾದ್ ವಿಷ್ಣುರ್ಯಜ್ಞಃ ಸ್ವರೂಪಧೃಕ್ ।**
**ಯಾ ಸ್ತ್ರೀ ದಕ್ಷಿಣಾ ಭೂತೇರಂಶಭೂತಾಽನಪಾಯಿನೀ ॥**

*ಭಾಗವತ 4. 1. 1-4*

ವಿರಕ್ತನಾದ ಸ್ವಾಯಂಭುವ ಮನು ಮಡದಿಯೊಡನೆ ಅಲಕನಂದಾತೀರದಲ್ಲಿ (ಬದರಿಕಾಶ್ರಮದಲ್ಲಿ) ತಪವನಾಚರಿಸಿದ. ಸಮಾಧ್ಯವಸ್ಥೆಯಲ್ಲಿ ಶ್ರೀಹರಿಯ ಕರುಣೆಯಿಂದ ಕಂಡ ಈ ಮಂತ್ರಗಳೇ 'ಯಾಜ್ಞಿಯಮಂತ್ರ' ಅಥವಾ 'ಈಶೋಪನಿಷತ್‌ಮಂತ್ರ' ಎನಿಸಿವೆ. ಶುಕ್ಲ ಯಜುರ್ವೇದದ ಕಾಣ್ವಶಾಖೆಯ ನಲ್ವತ್ತನೆಯ ಅಧ್ಯಾಯವಾಗಿ ಈ ಮಂತ್ರಗಳು ಉಪಲಬ್ಧವಿವೆ. ಮಾಧ್ಯಂದಿನ ಶಾಖೆಯಲ್ಲಿ ಸ್ವಲ್ಪ ಪಾಠಭೇದದೊಂದಿಗೆ ಹದಿನೇಳು ಮಂತ್ರಗಳಿಂದ ಈ ಉಪನಿಷತ್ತು ಉಪಲಬ್ಧವಿದೆ.

ಈ ಮಂತ್ರೋಪನಿಷತ್ತಿನ ಸಾಕ್ಷಾತ್ಕಾರದಲ್ಲಿರುವ ಸ್ವಾಯಂಭುವ ಮನುವನ್ನು ತಿನ್ನಲು ರಾಕ್ಷಸರು ಆಕ್ರಮಣಗೈದಾಗ ಎಲ್ಲೆಡೆ ಇರುವ ಯಜ್ಞನಾಮಕ ಹರಿ ಪ್ರಕಟನಾಗಿ ರಕ್ಕಸರನ್ನು ಸಂಹರಿಸಿ ತಾತ ಹಾಗೂ ಭಕ್ತನಾದ ಮನುವನ್ನು ಉದ್ಧರಿಸಿದನು-

**ಇತಿ ಮಂತ್ರೋಪನಿಷದಂ ವ್ಯಾಹರಂತಂ ಸಮಾಹಿತಮ್ ।**
**ದೃಷ್ಟ್ವಾಽಸುರಾ ಯಾತುಧಾನಾ ಜಗ್ಧುಮಭ್ಯದ್ರವದ್ ಕ್ಷುಧಾ ।**
**ತಾಂಸ್ತಥಾವಸಿತಾನ್ ವೀಕ್ಷ್ಯ ಯಜ್ಞಃ ಸರ್ವಗತೋ ಹರಿಃ ।**
**ಯಾಮೈಃ ಪರಿವೃತೋ ದೇವೈಃ ಹತ್ವಾಽಶಾಸತ್ ತ್ರಿವಿಷ್ಟಪಮ್ ॥**

*ಭಾಗವತ 8. 1. 17- 18*

ಇದರಂತೆ ಭಗವತ್ಪಾದರು ಭಾಷ್ಯದಲ್ಲಿ ಉಲ್ಲೇಖಿಸಿದ ಬ್ರಹ್ಮಾಂಡಪುರಾಣದ ವಚನವೂ ಇದೇ ಅಭಿಪ್ರಾಯಕ್ಕೆ ಪೋಷಕವಾಗಿದೆ.

**ಉಪನಿಷತ್ತಿನ ಬೆಳಕು**

ಈ ಉಪನಿಷತ್ತಿನ ಚಿಂತನೆಯ ಸಂಗ್ರಹವನ್ನು ಹೀಗೆ ಗಮನಿಸಬಹುದಾಗಿದೆ-

ಕಾಣುವ ಈ ವಿಶ್ವವು ಪ್ರಕೃತಿಯ ವಿಕಾಸವಾಗಿದೆ. ಪ್ರಕೃತಿ ಮತ್ತು ಅದರ

ವಿಸ್ತರಣೆಯಾದ ಈ ವಿಶ್ವವು ಎಲ್ಲ ಹಂತದಲ್ಲೂ ಎಲ್ಲ ಕಾಲದಲ್ಲೂ ಶ್ರೀಹರಿಯ ಅಧೀನವಾಗಿದೆ. ಅವನ ಪ್ರೇರಣೆಯಿಲ್ಲದೇ ಯಾವ ಕ್ರಿಯೆಯೂ ನಡೆಯಲಾರದು. ಅವನಿತ್ತ ಭಾಗ್ಯವನ್ನು ಅರಿತು ತೃಪ್ತಿಯ ಬದುಕು ಬಾಳು. ಕಂಡ ಕಂಡವರನ್ನು ಯಾಚಿಸದಿರು. ಭಗವಂತನ ಬಳಿ ಪಯಣಿಸುವ ಸಾಧಕನಿಗೆ ವೈರಾಗ್ಯ (ಅಲ್ಪತೃಪ್ತಿ) ಅತ್ಯಂತ ಆವಶ್ಯಕ. ಇದಲ್ಲದೇ ಅವರವರ ವರ್ಣಾಶ್ರಮೋಚಿತ ಸತ್ಕರ್ಮಗಳ ಅನುಷ್ಠಾನ ಅತ್ಯಾವಶ್ಯಕ. ಕರ್ಮದ ಅನುಷ್ಠಾನ ಅಜ್ಞಾನಿಗೆ ಜ್ಞಾನ ದಾಯಕ. ಅಪರೋಕ್ಷಜ್ಞಾನಿಗೆ ಮುಕ್ತಿಯಲ್ಲಿ ಮುದಪ್ರದ. ಈ ಹಿನ್ನೆಲೆಯಲ್ಲಿ ಜ್ಞಾನಿ ಮತ್ತು ಅಜ್ಞಾನಿ ಇಬ್ಬರಿಗೂ ಕರ್ಮಾನುಷ್ಠಾನ ಅಪರಿಹಾರ್ಯ. ಹೀಗೆ ವೈರಾಗ್ಯ-ಕರ್ಮಾನುಷ್ಠಾನಗಳೆರಡು ಜೀವನರಥದ ಎರಡು ಚಕ್ರಗಳು.

ಮೇಲೆ ತಿಳಿಸಿದ ಎರಡು ಸಾಧನಗಳು ಜ್ಞಾನದ ಉತ್ಪತ್ತಿ ವಿಕಾಸಗಳಿಗೆ ಪ್ರಧಾನ ಸಾಧನವೆನಿಸಿವೆ. ಆದರೆ ಸಂಪಾದಿಸಬೇಕಾದ ಜ್ಞಾನ ಪರಿಶುದ್ಧವಾಗಿರಬೇಕು. 'ಬ್ರಹ್ಮಜ್ಞಾನ'ದ ಹೆಸರಿನಲ್ಲಿ ಬ್ರಹ್ಮನ ವಿಕೃತ ರೂಪವನ್ನು ಪರಿಚಯಿಸುವ 'ಬ್ರಹ್ಮಹಂತೃ'ಗಳೇ ಹೆಚ್ಚಿರುವರು. ತಪ್ಪು ತಿಳಿವು ಹಾಗೂ ಉಪಾಸನೆಗಳು ಅನಂತಕಾಲದ ಅಂಧಕಾರಕ್ಕೆ ಆಹ್ವಾನ ನೀಡುತ್ತವೆ. ಆದ್ದರಿಂದ ಬ್ರಹ್ಮನ ಶುದ್ಧಜ್ಞಾನ ಪಡೆಯಬೇಕು. ಈ ಯಾಜ್ಞೀಯಮಂತ್ರಗಳು ನಿರೂಪಿಸುವ ಬ್ರಹ್ಮಸ್ವರೂಪ ಹೀಗಿದೆ-

'ಬ್ರಹ್ಮನು ನಿರ್ಭೀತ. ವಿಶ್ವದಲ್ಲೇ ಅತ್ಯಂತ ಪ್ರಧಾನವಾದ ವಸ್ತು. ಮನಸ್ಸಿಗಿಂತ ವೇಗದ ಓಟವುಳ್ಳವನು. ಅವನ ಅರಿವಿಗೆ ಗೋಚರಿಸದ ವಸ್ತುವಿಲ್ಲ. ಯಾರೂ ಅವನನ್ನು ಪೂರ್ತಿ ತಿಳಿಯಲು ಸಾಧ್ಯವಿಲ್ಲ. ಎಲ್ಲೆಡೆ ಇರುವ ಬ್ರಹ್ಮನು ಎಲ್ಲರನ್ನು ಮೀರಿ ಮುಂದಿರುವವನು. ಅಂತಹ ಭಗವಂತನಲ್ಲಿ ಜೀವರಿಂದ ಮಾಡಿಸುವ ಕರ್ಮಗಳನ್ನು ಮುಖ್ಯಪ್ರಾಣನು ಸಮರ್ಪಿಸುತ್ತಾನೆ. ಪರಬ್ರಹ್ಮನ ಅಣತಿಯನ್ನು ಎಚ್ಚರದಿಂದ, ಭೀತಿಯಿಂದ ವಿಶ್ವವು ಪಾಲಿಸುತ್ತದೆ. ಬ್ರಹ್ಮನಿಗೆ ಯಾರ ಭಯವೂ ಇರುವುದಿಲ್ಲ. ಅವನು ಎಲ್ಲ ವಸ್ತುಗಳ ಒಳ-ಹೊರಗೆ ವ್ಯಾಪ್ತನಾಗಿರುವನು. ಎಲ್ಲೆಡೆ ರಕ್ಷಕನಾಗಿರುವ ಭಗವಂತನನ್ನು ಸರಿಯಾಗಿ ಅರಿತವನು ತನ್ನ ರಕ್ಷಣೆಯ ಪ್ರಯತ್ನವನ್ನು ಮಾಡುವುದಿಲ್ಲ. ಬ್ರಹ್ಮನು ಶೋಕವಿದೂರನು. ಸ್ಥೂಲ ಮತ್ತು

ಲಿಂಗಶರೀರವಿಲ್ಲದವ. ಜ್ಞಾನಾನಂದ ಮೊದಲಾದ ಗುಣಗಳೇ ಅವನ ಮಂಗಲಶರೀರ. ಸರ್ವಜ್ಞನು. ನಾಲ್ಮೊಗ ಮುಕ್ಕಣ್ಣ ಮೊದಲಾದ ಎಲ್ಲ ದೇವತೆಗಳಿಂದ ಕೂಡಿದ ವಿಶ್ವದ ನಿಯಾಮಕ. ಪ್ರಕೃತಿಯನ್ನೂ ಮೀರಿದ ಸರ್ವೋತ್ತಮ. ಇಂತಹ ಪರಮಾತ್ಮನು ಅನಾದ್ಯನಂತಕಾಲದಿಂದ ಈ ವಿಶ್ವದ ಜನಕ. ಇವನನ್ನು ಉಪಾಸನೆಗೈದು ಸಾಕ್ಷಾತ್ಕರಿಸಿಕೊಂಡ ಜ್ಞಾನಿ ಇವನನ್ನು ತಲುಪುತ್ತಾನೆ.

ಸಾಧನಮಾರ್ಗದಲ್ಲಿ ಪರಿಶುದ್ಧಜ್ಞಾನದ ಸಂಪಾದನೆ ಮತ್ತು ಉಪದೇಶಗಳು ಎಷ್ಟು ಅಪರಿಹಾರ್ಯವೋ ಅದಕ್ಕಿಂತ ಹೆಚ್ಚು ಆವಶ್ಯಕವಾದುದು ತಪ್ಪು ತಿಳುವಳಿಕೆಯ (ವಿಪರೀತಜ್ಞಾನದ) ಖಂಡನೆ. ವಾಸ್ತವವಾದಿಯಾದ ದಾರ್ಶನಿಕ ಅಸತ್ಯವನ್ನು ಖಂಡಿಸುವಲ್ಲಿ ಯಾವ ದಾಕ್ಷಿಣ್ಯವನ್ನೂ ತೋರಬಾರದು. ತಪ್ಪು ತಿಳಿವು-ಉಪಾಸನೆಗಳನ್ನು ರೂಢಿಸಿಕೊಂಡವರು ಅಂಧಕಾರಮಯವಾದ ದುರ್ಗತಿಯನ್ನು ಪಡೆಯುವುದು ನಿಶ್ಚಿತ. ಅದರಂತೆ ಅದಕ್ಕಿಂತ ಹೆಚ್ಚಿನ ಅನರ್ಥವನ್ನು ಅನ್ಯಥಾ ಜ್ಞಾನವನ್ನು ಖಂಡಿಸದವರು ಪಡೆಯುವರು. ಈ ಹಿನ್ನೆಲೆಯಲ್ಲಿ ಅನ್ಯಥಾಜ್ಞಾನ ನಿಂದನೆ ಯಥಾರ್ಥಜ್ಞಾನದ ಉಪದೇಶ ಎರಡೂ ಅವಶ್ಯ ಕರ್ತವ್ಯವಾಗಿವೆ.

ಇದರಂತೆ, ಭಗವಂತನು ಸೃಷ್ಟಿಕಾರಣನಲ್ಲವೆಂದು ನಂಬಿದವರು ತಮಸ್ಸನ್ನೇ ಹೊಂದುವರು. ಇನ್ನು ಶ್ರೀಹರಿಯು ಕೇವಲ ಸೃಷ್ಟಿಕಾರಣ, ಸಂಹಾರಕಾರಣ ನಲ್ಲವೆಂದು ತಿಳಿದವರು ಮೊದಲಿನ ವರ್ಗಕ್ಕಿಂತ ಹೆಚ್ಚಿನ ಅನರ್ಥ ಹೊಂದುವರು. ಈ ಹಿನ್ನೆಲೆಯಲ್ಲಿ ಶ್ರೀಹರಿಯು ಸೃಷ್ಟಿಕಾರಣ ಮತ್ತು ಸಂಹಾರಕಾರಣನೆಂದು ಉಪಾಸನೆಗೈವುದು ಪರಿಪೂರ್ಣ ಮುಕ್ತಿಗೆ ಕಾರಣವಾಗಿದೆ.

ಭಗವಂತನ ಚಿನ್ಮಯರೂಪವು ಸೂರ್ಯಮಂಡಲದೊಳಗಿದೆ. ಭಕ್ತನ ಮೇಲಿನ ಕರುಣೆಯಿಂದ ಭಗವಂತನೇ ತನ್ನನ್ನು ತೆರೆದುಕೊಳ್ಳಬೇಕು. ಭಕ್ತನಿಗೆ ತನ್ನ ತನು ತೋರಿ ಅನುಗ್ರಹಿಸಬೇಕು.

ಓ ಪೂರ್ಣನಾದ ಭಗವಂತನೇ ! ಎಲ್ಲ ಅರಿತವನೇ ! ಅನಂತವಿಶ್ವದ ನಿಯಾಮಕ ! ಜ್ಞಾನಿಗಳಿಂದ ಮಾತ್ರವೇ ಹೊಂದಲ್ಪಡುವವನೇ ! ನನ್ನ ಸ್ವರೂಪಜ್ಞಾನ ಮತ್ತು ವೃತ್ತಿಜ್ಞಾನವನ್ನು ನೀನು ವಿಸ್ತಾರಗೊಳಿಸು. ನಾನು ನಿನ್ನ

ಮಂಗಲಮಯ ರೂಪವನ್ನು ಕಾಣಲು ಕಾತರನಾಗಿದ್ದೇನೆ. ನೀನು ಯಾರಿಂದಲೂ ತ್ಯಾಜ್ಯನಲ್ಲದ ಕಾರಣ 'ಅಹಮ್' ಎನಿಸಿರುವೆ. ನಿತ್ಯನಿರಂತರವಾಗಿ ಏಕರೂಪ ನಾಗಿರುವ ಕಾರಣ 'ಅಸ್ಮಿ' ಎನಿಸಿ ಪ್ರಸಿದ್ಧನಾದ ಮುಖ್ಯಪ್ರಾಣನಲ್ಲಿರುವೆ. ನಿನ್ನ ಸನ್ನಿಧಾನವನ್ನು ಜಾಗೃತವಾಗಿರಿಸಿಕೊಂಡ ಮುಖ್ಯಪ್ರಾಣನೇ ಅಮೃತನೆನಿಸಿರುವಾಗ ನೀನು ಅಮೃತನೆಂದು ಹೇಳುವುದೇನಿದೆ ? ಓ ಗುಣಪೂರ್ಣನಾದ ಭಗವಂತನೇ, ನನ್ನ ಮೇಲೆ ಕೃಪೆದೋರು. ನನ್ನನ್ನು ನಿನ್ನವನೆಂದು ಸ್ವೀಕರಿಸು.

ತಾನಾಗಿಯೇ ಚಲಿಸದ ಸದಾ ಪರಾವಲಂಬಿಯಾದ ಈ ವಿಶ್ವದ ನಿಯಂತೃವಾದುದರಿಂದ 'ಅಗ್ನಿ' ಎನಿಸಿದ ಭಗವಂತನೇ ! ನಮ್ಮ ಕರ್ಮ-ಸಾಧನೆಗಳನ್ನು ನೀನು ಸದಾ ತಿಳಿದವ. ನಮ್ಮನ್ನು ಸಂಸಾರದಲ್ಲಿಯೇ ನೆಲೆಸುವಂತೆ ಮಾಡುವ ಕರ್ಮಸಂತತಿಯಿಂದ ಬಿಡುಗಡೆಗೊಳಿಸು. ನೀನು ಮಾಡಿದ ಉಪಕಾರಕ್ಕಾಗಿ ಭಕ್ತಿ-ಶ್ರದ್ಧೆಗಳಿಂದ ಕೂಡಿದ ನಮನಗಳನ್ನು ಮಾತ್ರವೇ ಸಮರ್ಪಿಸಬಲ್ಲೆ.

**ಉಪನಿಷತ್‌ಪ್ರಭೆಯ ವೈಶಿಷ್ಟ್ಯ**

ಕೃಷ್ಣಾವಧೂತರ ಈ ವ್ಯಾಖ್ಯೆ, ಟೀಕೆಯ ಬೆಳಕಿನಲ್ಲಿ ಸಾಗುತ್ತ ಈ ಉಪನಿಷತ್ತಿನ ಮುಖ್ಯಸಂದೇಶವಾದ 'ಅವಿದ್ಯೆಯ ಖಂಡನೆ'ಯನ್ನು ಹೃದಯಂಗಮವಾಗಿ ಮಾಡುತ್ತಲಿದೆ. ಮೊದಲ ಪದ್ಯಕ್ಕೆ ಅದ್ವೈತವ್ಯಾಖ್ಯಾನಪದ್ಧತಿ ಹೀಗಿದೆ-

'ಈ ವಿಶ್ವವು ಪರಮಾತ್ಮನಿಂದ ಆಚ್ಛಾದಿತವಾಗಿದೆ. (ಈಶಾ+ವಾಸ್ಯಮ್) ಭೂವಲಯದಲ್ಲಿ ಕಾಣುವ ಜೀವ- ಜಡಗಳೆಲ್ಲ ಕಾಲ್ಪನಿಕ ಅಸ್ತಿತ್ವ ಹೊಂದಿವೆ. ಇವು ಸಾರ್ವಕಾಲಿಕ ಸತ್ಯವಸ್ತುಗಳಲ್ಲ. ಸುಗಂಧವನ್ನು ಹೊರಸೂಸುವ ಗಂಧದ ಕೊರಡು ನೀರಿನಲ್ಲಿ ನೆನೆದಾಗ ದುರ್ವಾಸನೆಯ ತಾಣವಾಗುತ್ತದೆ. ಅಲ್ಲಿ ಅಸ್ವಾಭಾವಿಕವಾದ ದುರ್ಗಂಧ ಕಾಣುವಂತೆ ಜೀವ-ಜಡಾತ್ಮಕ ವಿಶ್ವವು ಕಾಣುತ್ತಿದೆ. ಆದ್ದರಿಂದ ಮಿಥ್ಯೆಯಾದ ಪದಾರ್ಥಗಳಲ್ಲಿ ಆಸಕ್ತಿ ತಳೆಯದಿರು. ಆತ್ಮಜ್ಞಾನದತ್ತ ಚಿತ್ತ ಹರಿಯಲಿ. 'ಕುರ್ವನ್ನೇವ ಕರ್ಮಾಣಿ' ಎಂಬ ಎರಡನೆಯ ಮಂತ್ರವು ಕರ್ಮವನ್ನು

ವಿಧಿಸುತ್ತಿದೆ. ವೇದೋಕ್ತ ಕರ್ಮಗಳು ಆತ್ಮಜ್ಞಾನ ಸಂಪಾದಿಸದ ಅಜ್ಞಾನಿಗೆ ಅನಿವಾರ್ಯವಾಗಿವೆ. ಜ್ಞಾನಿಗೆ ಕರ್ಮಬಂಧನವಿಲ್ಲ.'

ಶ್ರೀಕೃಷ್ಣಾವಧೂತರು ಈ ವಾದವನ್ನು ಸುಂದರವಾಗಿ ವಿಮರ್ಶಿಸಿದ್ದಾರೆ. ವಿಶ್ವವು ಪರಮಾತ್ಮನಿಂದ ಆಚ್ಛಾದಿತವಾದರೆ ಕರ್ಮತ್ಯಾಗವೇಕೆ ? ಮೋಡದಿಂದ ಪಟ್ಟಣವು ಆಚ್ಛಾದಿತವಾದರೆ ವೈದಿಕರು ಸಂಧ್ಯಾವಂದನೆ ತ್ಯಜಿಸುವರೆ ? ಈಶಾಚ್ಛಾದಿತವಾದ ವಿಶ್ವದಲ್ಲಿ ಯಜ್ಞಾದಿ ಸತ್ಕರ್ಮಗಳ ಅನುಷ್ಠಾನ ನಿರಂತರ ನಡೆದಿದೆಯಲ್ಲವೆ ? ಭಗವಂತನಿಂದ ಈ ವಿಶ್ವವು ಆಚ್ಛಾದಿತವಾದುದರಿಂದ ಶಾಸ್ತ್ರೋಕ್ತ ಕರ್ಮವು ತ್ಯಾಜ್ಯವಾದರೆ, ಅಜ್ಞನಿಗೂ ತ್ಯಾಜ್ಯವಾಗದೆ ? ಆಗ ಮುಂದಿನ ಮಂತ್ರವು ಅಜ್ಞಾನಿಗೆ ಕರ್ಮವನ್ನು ಹೇಗೆ ವಿಧಿಸುತ್ತದೆ ? ಎಂಬ ಪ್ರಶ್ನೆ ಸ್ಥಿರವಾಗಿ ನಿಲ್ಲುತ್ತದೆ.

'ಪರಮಾತ್ಮನಿಂದ ವಿಶ್ವವು ಆಚ್ಛಾದಿತವಾಗಿದೆ' ಎಂದರೆ, ಪರಮಾತ್ಮನಿಗಿಂತ ಬೇರೆಯಾದ ಅಸ್ತಿತ್ವವು ವಿಶ್ವಕ್ಕೆ ಇಲ್ಲವೆಂದೇ ಅರ್ಥವಾಗಿದೆ. ಚೈತನ್ಯದಲ್ಲಿ ವಿಶ್ವವು ಆರೋಪಿತವಾಗಿದೆ. ಈ ಜ್ಞಾನವು ಜಾಗೃತವಾಗುವುದೇ 'ಈಶಾಚ್ಛಾದ್ಯತ್ವ' ಎನಿಸಿದೆ. ಇದನ್ನೇ ಅದ್ವೈತಜ್ಞಾನವೆಂದು ಕರೆಯಲಾಗಿದೆ. ಇದು ಅದ್ವೈತಿಗಳ ವಿವರಣೆ.

ಇದು ಪ್ರಾಮಾಣಿಕವಲ್ಲ. ಆಚ್ಛಾದ್ಯ (ಅಧ್ಯಸ್ತ) ಆಚ್ಛಾದಕ (ಅಧಿಷ್ಠಾನ) ಗಳಿಗೆ ಎಲ್ಲೂ ಅಭೇದವು ಕಂಡಿರುವುದಿಲ್ಲ. 'ಚೈತನ್ಯ ವೊಂದೇ ಪರಮಸತ್ಯವೆಂಬ ಪರಿಪಕ್ವವಾದ ಜ್ಞಾನವು ಅದ್ವೈತಜ್ಞಾನವೆನಿಸಿದ್ದು ಇದು ಶುಕ-ವಾಮದೇವ-ಗೌಡಪಾದರಂತಹವರಿಗೆ ಜನಿಸಬಹುದು. ಆ ಅವಸ್ಥೆಯಲ್ಲಿ ಕರ್ಮತ್ಯಾಗವನ್ನು ಉಪನಿಷತ್ತು ಬೋಧಿಸುತ್ತದೆ' ಎಂಬ ವಾದವೂ ಅನುಚಿತ.

ಏಕೆಂದರೆ ಸ್ಮೃತಿಯು- 'ಶ್ರೀಕೃಷ್ಣನ ಆರಾಧನೆ ನಡೆಸದ ಅಜ್ಞನಿಗೆ ಪಾಪಲೇಪ ಖಚಿತ. ಆದರೆ ಬ್ರಹ್ಮನನ್ನು ಸಾಕ್ಷಾತ್ಕರಿಸಿಕೊಂಡ ಜ್ಞಾನಿಯೂ ವಿಹಿತಕರ್ಮವನ್ನು ತೊರೆದಲ್ಲಿ, ಅವನಿಗೆ ಮುಕ್ತಿಯಲ್ಲಿ ಆನಂದವು ಪೂರ್ಣವಾಗಿ ಅನುಭವಗೋಚರವಾಗಲಾರದು, ಎಂದು ಸಾರುತ್ತಿದೆ-

'ಅಜ್ಞಸ್ಯ ಕರ್ಮ ಲಿಪ್ಯೇತ ಕೃಷ್ಣೋಪಾಸ್ತಿಮಕುರ್ವತಃ ।
ಜ್ಞಾನಿನೋಽಪಿ ಯತೋ ಹ್ರಾಸ ಆನಂದಸ್ಯ ಭವೇದ್ ಧ್ರುವಮ್ ।
ಅತೋಽಲೇಪೇಽಪಿ ಲೇಪಃ ಸ್ಯಾತ್ ಅತ: ಕಾರ್ಯೈವ ಸಾ ಸದಾ ॥
(ನಾರದೀಯಪುರಾಣ)

ಆದ್ದರಿಂದ ವೇದೋಕ್ತ ಕರ್ಮಾನುಷ್ಠಾನವು ಜ್ಞಾನಿಗೂ ಅಪರಿಹಾರ್ಯ.

'ಜಗತ್ಯಾಂ ಜಗತ್' ಎಂಬಲ್ಲಿ ಜಗತೀಶಬ್ದವು ಪೃಥಿವಿಯನ್ನು ತಿಳಿಸುತ್ತದೆ ಎಂಬುದು ಅದ್ವೈತಿಗಳ ವಿವರಣೆ. ಈ ವಿವರಣೆಯಂತೆ ಪೃಥಿವಿಯಲ್ಲಿರುವ ವಸ್ತುಗಳಿಗೆ ಮಾತ್ರವೇ ಈಶಾಭೇದವು (ಈಶನಲ್ಲಿ ಆರೋಪಿತತ್ವವು) ಸಿದ್ಧವಾದೀತು. ಆದರೆ ಅದ್ವೈತಿಗಳಿಗೆ ಅಭಿಲಷಿತವಾದ ಹದಿನಾಲ್ಕು ಲೋಕಗಳಿಂದ ಕೂಡಿದ ಸಮಗ್ರ ವಿಶ್ವದ ಮಿಥ್ಯಾತ್ವವು ಸಿದ್ಧಿಸದು. ಶ್ರೀಮಧ್ವರ ವ್ಯಾಖ್ಯೆಯಂತೆ 'ಜಗತೀ'ಪದವು ಪ್ರಕೃತಿ ಎಂಬ ಅರ್ಥ ನೀಡುತ್ತಿದ್ದು, ಸಮಗ್ರ ವಿಶ್ವವು ಪ್ರಕೃತಿಯ ವಿಕಾಸವಾಗಿದ್ದು ಅದರ ಅಭಿಮಾನಿನಿಯಾದ ಶ್ರೀದೇವಿಯ ನಿಯಂತ್ರಣಕ್ಕೊಳಪಟ್ಟಿದೆ. ಆ ಶ್ರೀತತ್ವವು ಶ್ರೀಮನ್ನಾರಾಯಣನ ಅಧೀನವಾಗಿದೆ ಎಂಬ ಅರ್ಥವು ವೇದ-ಶಾಸ್ತ್ರಗಳ ಮೂಲಸ್ಫೂರ್ತಿಗೆ ಅತ್ಯಂತ ಅನುಗುಣವಾಗಿದೆ.

ಇನ್ನು, 'ಧನಂ ಮಾ ಕಾಂಕ್ಷೀಃ ಮಿಥ್ಯಾವಿಷಯಾಂ ಗೃಧಿಂ ಮಾ ಕಾರ್ಷೀಃ' ಎಂಬ ವಿವರಣೆಯಂತೂ ಅತೀವ ಅಸಮಂಜಸ. ಹಣದಿಂದ ಹಲವು ಕಾರ್ಯಸಿದ್ಧಿಯಾಗುವುದು ಪ್ರತ್ಯಕ್ಷಾನುಭವಸಿದ್ಧವಾಗಿರುವುದರಿಂದ ಅದಕ್ಕೆ ಮಿಥ್ಯಾತ್ವವನ್ನು ಹೇಳಲು ಸಾಧ್ಯವೇ ಇಲ್ಲ.

'ಭುಂಜೀಥಾಃ-ಪಾಲಯೇಥಾಃ' ಎಂಬ ಅರ್ಥವಿವರಣೆಯೂ ಆಶ್ಚರ್ಯಕರವಾಗಿದೆ. ಪಾಲನವೆಂಬ ಅರ್ಥವಿಲ್ಲದ ಸಂದರ್ಭದಲ್ಲಿ ಮಾತ್ರವೇ ಭುಜ್‌ಧಾತುವಿಗೆ ಆತ್ಮನೇಪದವು ಬರುತ್ತದೆ. ರಕ್ಷಣೆ ಎಂಬ ಅರ್ಥವು ವಿವಕ್ಷಿತವಾದಾಗ ಆತ್ಮನೇಪದವು ಬರುವುದಿಲ್ಲ. ಪಾಲನಾರ್ಥಕತ್ವವಿಲ್ಲದ ಪ್ರಸಂಗದಲ್ಲಿ 'ಓದನಂ ಭುಂಕ್ತೇ' ಇತ್ಯಾದಿಯಾಗಿ (ಭುಜ್‌ಧಾತುವಿಗೆ ಆತ್ಮನೇಪದದಲ್ಲಿ) ಪ್ರಯೋಗವು ಕಂಡಿದೆ. ಪಾಲನಾರ್ಥಕತ್ವವು ವಿವಕ್ಷಿತವಾದಾಗ

'ಪೃಥಿವೀಂ ಭುನಕ್ತಿ' ಎಂಬಲ್ಲಿ ಭುಜ್‌ಧಾತುವು ಪರಸ್ಮೈಪದಿಯಾಗಿರುವುದು ಗಮನಾರ್ಹ.

ಇನ್ನು ಈಶಾ+ವಾಸ್ಯಂ ಎಂಬ ಪದಪಾಠ ಪ್ರಶ್ನಾರ್ಹವಾಗಿದೆ. ವೇದವ್ಯಾಖ್ಯಾನರೂಪವಾದ ಭಾಗವತದಲ್ಲಿ 'ಈ ಎಲ್ಲ ವಿಶ್ವವು ಪರಮಾತ್ಮನ ಆವಾಸಸ್ಥಾನ' ಎಂಬ ಅರ್ಥದಲ್ಲಿ 'ಈಶಾವಾಸ್ಯಮ್' ಎಂಬ ಪದದ ವಿವರಣರೂಪವಾದ 'ಆತ್ಮಾವಾಸ್ಯಮ್' ಎಂಬ ಪದವನ್ನು ವ್ಯಾಸರು ಬಳಸಿದ್ದಾರೆ. ಇಲ್ಲಿ ಪರಮಾತ್ಮನಿಂದ ವಿಶ್ವವು ಆಚ್ಛಾದಿತ ಎಂಬ ಅರ್ಥವು ವಿವಕ್ಷಿತವಾಗಿದ್ದರೆ ಆತ್ಮವಾಸ್ಯಮ್ (ಆತ್ಮನಾ+ವಾಸ್ಯಮ್) ಎಂಬುದಾಗಿ ಪದನಿರ್ದೇಶವಿರಬೇಕಿತ್ತು. ದೀರ್ಘಾಂತವಾದ 'ಆತ್ಮಾವಾಸ್ಯಮ್' ಎಂಬ ಪದದ ನಿರ್ದೇಶನದ ಮೂಲಕ ಶ್ರೀವ್ಯಾಸರು 'ಆತ್ಮನಃ ಆವಾಸ್ಯಮ್' (ಪರಮಾತ್ಮನ ಆವಾಸಭೂಮಿ) ಎಂಬ ಅರ್ಥವನ್ನೇ ತಿಳಿಸಿರುವುದು ಗಮನಾರ್ಹ. ಈ ಹಿನ್ನೆಲೆಯಲ್ಲಿ ಈ ವಿಶ್ವವೆಲ್ಲ ಪರಮಾತ್ಮನ ಆವಾಸಸ್ಥಾನವಾಗಿದೆ. ಅವನು ನೀಡಿದ್ದರಲ್ಲಿ ತೃಪ್ತನಾಗು. ಮತ್ತಾರನ್ನೂ ಕಾಡದಿರು, ಬೇಡದಿರು ಎಂಬ ಅರ್ಥವು ಇಲ್ಲಿ ಸಮಂಜಸವಾಗಿದೆ.

ಎರಡನೆಯ ಶ್ಲೋಕದಲ್ಲಿ 'ನ ಕರ್ಮ ಲಿಪ್ಯತೇ ನರೇ' ಎಂಬ ಪಾದಕ್ಕೆ ಅದ್ವೈತಿಗಳ ವ್ಯಾಖ್ಯೆ ಹೀಗಿದೆ- ಅಜ್ಞಾನಿಗೆ ಕರ್ಮದ ವಿನಾಯಿತಿ ಇಲ್ಲ. ಬದುಕ ಬಯಸುವವನು ವೇದೋಕ್ತ ಕರ್ಮಗಳನ್ನು ಮಾಡುವ ಸಂಕಲ್ಪದೊಂದಿಗೆ ಬದುಕಬೇಕು. 'ನರೇ' ಎಂಬಲ್ಲಿ ನ+ರೇ ಎಂಬುದಾಗಿ ಪದಚ್ಛೇದ. 'ರೇ' ಎಂಬುದು ಸಂಬೋಧನಾರ್ಥಕ. ಎಲೋ! ಅಜ್ಞನೇ ವಿಹಿತಕರ್ಮವ ಮಾಡು. ಕರ್ಮವನ್ನು ತೊರೆದಲ್ಲಿ ಪಾಪಲೇಪವಾಗದಿರದು, ಪಾಪಲೇಪ ಖಚಿತ. ಆದ್ದರಿಂದ ಕರ್ಮ ಮಾಡು.

ಈ ಅರ್ವಾಚೀನ ಅದ್ವೈತಿಗಳ ವಿವರಣೆ ಸೂಕ್ತವಲ್ಲವೆನ್ನುತ್ತಾರೆ ಅವಧೂತ ಕೃಷ್ಣಾಚಾರ್ಯರು- ರಸಮಯ ಆಹಾರವನ್ನು ಸ್ವೀಕರಿಸುತ್ತೇನೆಂಬ ಸಂಕಲ್ಪ ಮಾತ್ರದಿಂದಲೇ ಹಸಿವು ಹೋಗಲಾರದು. ಭೋಜನಕ್ರಿಯೆಯಲ್ಲಿ ತೊಡಗುವುದು ಅನಿವಾರ್ಯ. ಅದರಂತೆ ಕರ್ಮಾಚರಣೆ ನಡೆಸದೆಯೇ ಕರ್ಮ ಮಾಡುತ್ತ

ಬದುಕುವ ಇಚ್ಛೆಯ ಅಭಿವ್ಯಕ್ತಿ ಮಾತ್ರದಿಂದ ಪಾಪವು ಅಂಟದಿರದು. ಆದ್ದರಿಂದ ಜ್ಞಾನಿ ಮತ್ತು ಅಜ್ಞಾನಿ ಈರ್ವರು ಪಾಪಲೇಪವಾಗಬಾರದೆಂಬ ಭಾವನೆಯಿಂದ ಮತ್ತು ಅನುಷ್ಠಾನದ ಮೂಲಕ ಆದರ್ಶವನ್ನು ನೀಡಲು ಕರ್ಮಾಚರಣೆಯನ್ನು ಅವಶ್ಯ ಮಾಡಲೇಬೇಕು.

ಇನ್ನೂ ನ+ರೇ ಎಂಬುದಾಗಿ ಪದವನ್ನು ಒಡೆದು 'ರೇ' ಎಂಬುದು ಸಂಬೋಧನೆಗಾಗಿ ಇದೆ ಎಂಬ ವಿವರಣೆ ಪ್ರಾಮಾಣಿಕವಲ್ಲ. 'ಸಂಬೋಧನೇ ಚಾಲ್ಪೇ' ಎಂಬ ಸೂತ್ರವು ಸಂಬೋಧನಾರ್ಥದಲ್ಲಿ ಉದಾತ್ತಸ್ವರವನ್ನು ವಿಧಿಸುತ್ತದೆ. 'ಅಂತೇ ಚಾಧಿಕರಣಸ್ಯ' ಎಂಬ ಸೂತ್ರವು ಅಧಿಕರಣಾರ್ಥಕ ಸಪ್ತಮೀ ವಿಭಕ್ತಿಯುಳ್ಳ 'ರೇ' ಎಂಬ 'ಗುರು' ಅಕ್ಷರಕ್ಕೆ ಸ್ವರಿತಸಂಜ್ಞೆಯು ಬರುತ್ತದೆ ಎಂದು ತಿಳಿಸಿದೆ. ಪ್ರಕೃತ ಸಂಬೋಧನಾರ್ಥಕತ್ವವನ್ನು ಹೇಳಿದರೆ ಉದಾತ್ತಸ್ವರವು ಅಪರಿಹಾರ್ಯವಾಗುವುದು. ಆದ್ದರಿಂದ ವೈದಿಕ ಪ್ರಾತಿಶಾಖ್ಯದ ಸ್ವರವ್ಯವಸ್ಥೆಗೆ 'ನ+ರೇ' ಎಂಬ ಪದಚ್ಛೇದವು ಅನನುಗುಣವಾಗಿದೆ.

ವೇದೋಕ್ತ ಕರ್ಮಾನುಷ್ಠಾನವು ಅಜ್ಞಾನಿಯಂತೆ ಜ್ಞಾನಿಗೂ ಅಪರಿಹಾರ್ಯವೆಂದು 'ನಿಯಮಾಚ್ಚ' (3.4.7) ಎಂಬ ಬ್ರಹ್ಮಸೂತ್ರ ಪ್ರತಿಪಾದಿಸುತ್ತಿದೆ. ಹಿಂದೆ ಉದಾಹರಿಸಿದ ನಾರದೀಯ ಪುರಾಣವಚನವು ಜ್ಞಾನಿಗೂ ಕರ್ತವ್ಯವನ್ನು ವಿಧಿಸುತ್ತಿರುವುದರಿಂದ, 'ಕರ್ಮಾನುಷ್ಠಾನ ಅಜ್ಞಾನಿಗೆ ಇದೆ' ಎಂಬ ವಾದ ಪ್ರಮಾಣಶುದ್ಧವೆನಿಸದು.

**ತದ್ ದೂರೇ ತತ್ ಉ ಅಂತಿಕೇ**

ಈ ಮಂತ್ರದ ಅರ್ಥವು ಅದ್ವೈತವ್ಯಾಖ್ಯಾನಗಳಲ್ಲಿ ಹೀಗೆ ವಿವರಿಸಲ್ಪಟ್ಟಿದೆ- 'ಬ್ರಹ್ಮನು ದೂರದಲ್ಲಿರುವನು ಹತ್ತಿರದಲ್ಲಿರುವನು ಎಂಬುದಾಗಿ ತಿಳಿಸಲಾಗಿದೆ. ಹತ್ತಿರ ಇರುವವನು ದೂರನಾಗಲಾರ, ದೂರದಲ್ಲಿರುವವನು ಹತ್ತಿರನೂ ಅಲ್ಲ. ಒಬ್ಬನಲ್ಲಿ ವಿರುದ್ಧಧರ್ಮಗಳನ್ನು ಒಪ್ಪಿದರೆ 'ವ್ಯಾಘಾತ' ದೋಷ ಬರುವುದು. ಆದ್ದರಿಂದ ಇದನ್ನು ಹೀಗೆ ವಿವರಿಸಬೇಕು. ಬ್ರಹ್ಮನು ಎರಡು ರೂಪ ಪಡೆದಿರುವನು. 'ಮಾಯಾ' ಗುಣವಿಶಿಷ್ಟನಾದ ರಾಮ-ಕೃಷ್ಣ-ಶಂಕರ ಮೊದಲಾದ

ನಾಮಧಾರಿಯಾದ ಸಗುಣಬ್ರಹ್ಮನು 'ಸೋಪಾಧಿಕ'ನೆನಿಸಿ ಉಪಾಸ್ಯನಾಗಿ ಹತ್ತಿರದಲ್ಲಿರುವನು. ನಿರ್ಗುಣ ನಿರಾಕಾರನಾದ ಶುದ್ಧಬ್ರಹ್ಮನು ವಾಗಿಂದ್ರಿಯ ಮತ್ತು ಮನಸ್ಸಿಗೆ ಅಗೋಚರನಾಗಿದ್ದು 'ನಿರುಪಾಧಿಕ'ನೆನಿಸಿ ದೂರದಲ್ಲಿರುವ ನೆಂದು ಕರೆಸಿಕೊಳ್ಳಲ್ಪಟ್ಟಿದ್ದಾನೆ.

ಈ ನಿರೂಪಣೆಯು ಉಪನಿಷತ್ತಿನ ಮೂಲಸ್ಫೂರ್ತಿಗೆ ವಿರುದ್ಧವೆನ್ನುತ್ತಾರೆ ಕೃಷ್ಣಾವಧೂತರು. ಉಪನಿಷತ್ತಿನಲ್ಲಿರುವ 'ಉ'ಕಾರವು 'ಏವ' (ಅದೇ) ಎಂಬರ್ಥದಲ್ಲಿದ್ದು ಬ್ರಹ್ಮಭೇದವನ್ನು ನಿರಾಕರಿಸುತ್ತಿದೆ. ಬ್ರಹ್ಮನು ಸರ್ವವ್ಯಾಪಿ ಯಾಗಿರುವುದರಿಂದ (ಎಲ್ಲೆಡೆ ಇರುವುದರಿಂದ) ಎಲ್ಲರ ಒಳಗಿದ್ದು 'ಸಮೀಪದಲ್ಲಿರುವವ' ಎನಿಸುವನು. ವಿಶ್ವದ ಹೊರಗೂ ಇರುವ ಕಾರಣ 'ದೂರದಲ್ಲಿರುವವ' ಎನಿಸಿರುವನು. ಅದ್ವೈತಿಗಳು ವಿವರಿಸುವಂತೆ, ಸೋಪಾಧಿಕ ನಿರುಪಾಧಿಕರೆಂಬುದಾಗಿ ಬ್ರಹ್ಮನಲ್ಲಿ ದ್ವೈವಿಧ್ಯವು ಅಪ್ರಾಮಾಣಿಕವಾಗಿದೆ. 'ಉ'ಕಾರದಿಂದ ಈ ಅರ್ಥವು ಸ್ಫುಟವಾಗುತ್ತದೆ.

**ವಿದ್ಯಾಂ ಚಾವಿದ್ಯಾಂ ಚ**

'ವಿದ್ಯಾಂ ಚ ಅವಿದ್ಯಾಂ ಚ ಯಸ್ತದ್ವೇದೋಭಯಂ ಸಹ' ಎಂಬ ಮಂತ್ರದ ಅರ್ಥವನ್ನು ಹಿಂದೆ ವಿವರಿಸಲಾಗಿದೆ. ತತ್ವಜ್ಞಾನ ಸಂಪಾದನೆ ಮತ್ತು ಮಿಥ್ಯಾಜ್ಞಾನನಿಂದನೆ ಅತ್ಯಂತ ಆವಶ್ಯಕ ಎಂಬುದು ಇಲ್ಲಿನ ಶ್ಲೋಕಗಳ ತಾತ್ಪರ್ಯವಾಗಿದೆ.

ಶ್ರೀರಾಮಾನುಜರ ವ್ಯಾಖ್ಯಾನಪರಂಪರೆ ಈ ಪದಗಳ ಅರ್ಥವನ್ನು ಹೀಗೆ ವಿವರಿಸಿದೆ- ಇಲ್ಲಿ 'ಅವಿದ್ಯೆ' ಎಂದರೆ ವಿದ್ಯಾವಿರೋಧಿಯಾದ 'ಕರ್ಮ' ಎಂದರ್ಥ. 'ವಿದ್ಯೆ' ಎಂದರೆ ಜ್ಞಾನ, ಇವೆರಡೂ ಮುಕ್ತಿಸಾಧನವೆಂದು ನಿರೂಪಿಸಲಾಗಿದೆ. ಈ ಅಭಿಪ್ರಾಯವು ಸಮರ್ಪಕವಲ್ಲವೆಂದು ಶ್ರೀಮಧ್ವರ ಭಾಷ್ಯೋದಾಹೃತ ಪ್ರಮಾಣ ತಿಳಿಸುತ್ತಿದೆ-

**ತಸ್ಮಾದ್ ಯಥಾಸ್ವರೂಪಂ ಚ ನಾರಾಯಣಮನಾಮಯಮ್ ।**
**ಅಯಥಾರ್ಥಸ್ಯ ನಿಂದಾಂ ಚ ಯೇ ವಿದುಃ ಸಹ ಸಜ್ಜನಾಃ ॥**

ತೇ ನಿಂದಯಾಽಯಥಾರ್ಥಸ್ಯ ದುಃಖಾಜ್ಞಾನಾದಿರೂಪಿಣಃ ।
ದುಃಖಾಜ್ಞಾನಾದಿಸಂತೀರ್ಣಾಃ ಸುಖಜ್ಞಾನಾದಿರೂಪಿಣಃ ।
ಯಥಾರ್ಥಸ್ಯ ಪರಿಜ್ಞಾನಾತ್ ಸುಖಜ್ಞಾನಾದಿರೂಪತಾಂ ಯಾಂತಿ ॥

ಇದರ ಅಭಿಪ್ರಾಯ ಹೀಗಿದೆ- 'ನಾರಾಯಣನ ಯಥಾರ್ಥಸ್ವರೂಪವನ್ನು ಅರಿಯಬೇಕು. ಭಗವಂತನ ಬಗ್ಗೆ ಇರುವ ತಪ್ಪುತಿಳುವಳಿಕೆಯನ್ನು ಖಂಡಿಸಲೂ ಬೇಕು. ಸಾಧಕರು ಅಯಥಾರ್ಥಜ್ಞಾನದ ನಿಂದನೆಯಿಂದ ದುಃಖ-ಅಜ್ಞಾನಗಳನ್ನು ತೊರೆದು, ಯಥಾರ್ಥಜ್ಞಾನದ ಫಲವಾಗಿ ಸುಖ-ಜ್ಞಾನರೂಪವಾದ ಮುಕ್ತಿಯನ್ನು ಪಡೆಯುವರು.'

ಯಾಜ್ಞೀಯೋಪನಿಷನ್ಮಂತ್ರಗಳ ವ್ಯಾಖ್ಯಾನರೂಪವಾದ ಈ ಕೂರ್ಮಪುರಾಣ ವಚನವು ಜ್ಞಾನಕರ್ಮಗಳು ಮುಕ್ತಿಸಾಧನವೆಂಬುದನ್ನು ತಿಳಿಸುತ್ತಿಲ್ಲ. ಕರ್ಮವು ಜ್ಞಾನವನ್ನು ಉಂಟುಮಾಡುವ ಮೂಲಕ ಪರಂಪರಯಾ ಮುಕ್ತಿಸಾಧನವಾಗಬಲ್ಲದಾದರೂ ಜ್ಞಾನ-ಕರ್ಮಗಳಿಗೆ ಸಮಪ್ರಾಧಾನ್ಯವಿರುವುದಿಲ್ಲ. ಜ್ಞಾನವೇ ಮುಕ್ತಿಸಾಧನವೆಂದು ಶ್ರುತಿಸ್ಮೃತಿಗಳು ಸಾರುತ್ತಿರುವುದರಿಂದ ವಿಶಿಷ್ಟಾದ್ವೈತ ವ್ಯಾಖ್ಯಾನವು ಉಪಾದೇಯವಲ್ಲ.

ಇನ್ನು ಅದ್ವೈತವಾದಿಗಳು 'ವಿದ್ಯಾ'ಪದವು ದೇವತಾಜ್ಞಾನವಾಚಕವೆಂದು ನಿರೂಪಿಸಿದ್ದಾರೆ. ಈ ನಿರೂಪಣೆ ಅಸಂಗತ. ಏಕೆಂದರೆ ಪ್ರಕೃತ ದೇವತಾಜ್ಞಾನದ ಸಂಪಾದನೆಯ ಅಥವಾ ಆವಶ್ಯಕತೆಯ ಪ್ರಸ್ತಾಪವೇ ಇರುವುದಿಲ್ಲ. ಇಲ್ಲಿ ಅದ್ವೈತಿಗಳು ಹೀಗೆ ಪರಿಹಾರ ನೀಡುವುದಿದೆ- 'ಕುರ್ವನ್ನೇವೇಹ ಕರ್ಮಾಣಿ' ಎಂಬ ಮಂತ್ರವು ಯಜ್ಞಾದಿಕರ್ಮಗಳನ್ನು ವಿಧಿಸುತ್ತಿದೆ. ಯಜ್ಞವೆಂದರೆ ದೇವತೆಯನ್ನು ಉದ್ದೇಶಿಸಿ ಮಾಡುವ ಸಮರ್ಪಣೀಯ ವಸ್ತುವಿನ ತ್ಯಾಗವೇ ಆಗಿರುತ್ತದೆ. ದೇವತೆಯ ಸ್ವರೂಪಜ್ಞಾನವಿಲ್ಲದೆಯೇ ಸಮರ್ಪಣೆ ಹೇಗೆ ಸಾಧ್ಯ? ಆದ್ದರಿಂದ ದೇವತಾಜ್ಞಾನ ಪ್ರಕೃತ ಪ್ರಸ್ತುತವಾಗಿದೆ'. ಈ ವಾದವೂ ಸಮಂಜಸವಲ್ಲ. 'ಕುರ್ವನ್ನೇವೇಹ' ಎಂಬ ಮಂತ್ರವು ಜ್ಞಾನಿ-ಅಜ್ಞಾನಿಗೆ ನಿವೃತ್ತ ಕರ್ಮಾಚರಣೆಯನ್ನು ಒತ್ತಿ ಹೇಳಿದೆಯಲ್ಲದೇ ಫಲಕಾಮನೆಯಿಂದ ಕೂಡಿದ

ಕರ್ಮಾನುಷ್ಠಾನವನ್ನಲ್ಲ. ಈ ಹಿನ್ನೆಲೆಯಲ್ಲಿ ಪ್ರಕೃತ ದೇವತಾಜ್ಞಾನ ಅಪ್ರಸ್ತುತವಾಗುತ್ತದೆ. ಆದ್ದರಿಂದ 'ವಿದ್ಯಾ' ಪದವು ಯಥಾರ್ಥಜ್ಞಾನವನ್ನು ತಿಳಿಸುತ್ತದೆ ಎಂಬ ಶ್ರೀಮದಾಚಾರ್ಯರ ನಿರೂಪಣೆ ಪ್ರಮಾಣಶುದ್ಧವಾಗಿದೆ.

**ಸಂಭೂತಿಂ ಚ ವಿನಾಶಂ ಚ**

ಮೇಲಿನ ಶ್ಲೋಕಗಳ ಮಾಧ್ವ ವ್ಯಾಖ್ಯಾನದ ಸಾರ ಹೀಗಿದೆ- 'ಸಂಭೂತಿ' ಎಂಬ ಶಬ್ದಕ್ಕೆ ಶಕ್ತಿವೃತ್ತಿಯಿಂದ ಬರುವ ಸಹಜವಾದ ಅರ್ಥ ಉತ್ಪತ್ತಿ. 'ವಿನಾಶ' ಎಂಬ ಶಬ್ದದ ಅರ್ಥ ಸ್ಪಷ್ಟ. ಮಿಥ್ಯಾಜ್ಞಾನದ ನಿಂದನೆಗಾಗಿ ಮಿಥ್ಯಾಜ್ಞಾನದ ಅನೇಕ ಪ್ರಕಾರಗಳನ್ನು ಉಪನಿಷತ್ತು ವಿವರಿಸುತ್ತ ಬಂದಿದೆ. ಈಗ ಅದನ್ನೇ ಮುಂದುವರಿಸಿ ವಿವರಿಸುತ್ತಿದೆ- 'ಭಗವಂತನು ಸಂಹಾರಕನಾಗಿದ್ದು ಸೃಷ್ಟಿಕರ್ತೃವಲ್ಲವೆಂದು ಉಪಾಸಿಸುವರು ಅಂಧಕಾರಮಯ ಲೋಕವನ್ನು ತಲುಪುತ್ತಾರೆ. ಯಾರು ಕೇವಲ ಸೃಷ್ಟಿಕರ್ತನೆಂದು ಚಿಂತಿಸುವರೋ ಅವರೂ ಹೆಚ್ಚಿನ ದುಃಖವನ್ನು ಅನುಭವಿಸುವರು. ಆದ್ದರಿಂದ ಶ್ರೀಹರಿಯು ಕೇವಲ ಸೃಷ್ಟಿಕರ್ತಾ ಅಥವಾ ಸಂಹಾರಕರ್ತನೆಂದು ಉಪಾಸಿಸದೇ ಎರಡಕ್ಕೂ ಕಾರಣನೆಂದು ಉಪಾಸನೆ ಮಾಡಬೇಕು. ಈ ಅಂಶವು ಭಾಷ್ಯೋದಾಹೃತ ಕೂರ್ಮಪುರಾಣದಲ್ಲಿ ಸ್ಫುಟವಾಗಿದೆ-

**ಏವಂ ಸೃಷ್ಟ್ಯಾದಿಕರ್ತೃತ್ವಂ ನಾಂಗೀಕುರ್ವಂತಿ ಯೇ ಹರೇಃ ।**
**ತೇಽಪಿ ಯಾಂತಿ ತಮೋ ಘೋರಂ ತಥಾ ಸಂಹಾರಕರ್ತೃತಾಮ್ ॥**
**ನಾಂಗೀಕುರ್ವಂತಿ ತೇಽಪ್ಯೇವಂ ತಸ್ಮಾತ್ ಸರ್ವಗುಣಾತ್ಮಕಮ್ ।**
**ಸರ್ವಕರ್ತಾರಮೀಶೇಶಂ ಸರ್ವಸಂಹಾರಕಾರಕಮ್ ...... ॥ ಇತಿ ।**

ಅದ್ವೈತವಾದಿಗಳು ಈ ಶ್ಲೋಕಕ್ಕೆ ಹೀಗೆ ವ್ಯಾಖ್ಯಾನ ಮಾಡಿದ್ದಾರೆ- 'ಸಮ್ಯಕ್ ಭೂತಿಃ ಉತ್ಪತ್ತಿಃ ಯಸ್ಯ' ಎಂಬ ವ್ಯುತ್ಪತ್ತಿಗೆ ಅನುಗುಣವಾಗಿ ಉತ್ಪತ್ತಿ ಇರುವ ಚತುರ್ಮುಖ(ಹಿರಣ್ಯಗರ್ಭ)ನನ್ನು 'ಸಂಭೂತಿ' ಪದದಿಂದ ತೆಗೆದುಕೊಳ್ಳಬೇಕು. ಯಾರು ಕೇವಲ ಬ್ರಹ್ಮನನ್ನು ಉಪಾಸಿಸುವರೋ ಅವರು ತಮಸ್ಸಿಗೆ ಹೋಗುತ್ತಾರೆ. 'ಅಸಂಭೂತಿ' ಶಬ್ದದಿಂದ, 'ನ ವಿದ್ಯತೇ ಸಂಭೂತಿಃ ಉತ್ಪತ್ತಿಃ ಯಸ್ಯಾ ಸಾ' ಎಂಬ

ವ್ಯುತ್ಪತ್ತಿಯಂತೆ ಉತ್ಪತ್ತಿ ಇಲ್ಲದ ನಿತ್ಯವಾದ ಪ್ರಕೃತಿಯನ್ನು ತೆಗೆದುಕೊಳ್ಳಬೇಕು. ಹೀಗೆ ಪ್ರಕೃತಿ ಮತ್ತು ಹಿರಣ್ಯಗರ್ಭ ಇಬ್ಬರ ಉಪಾಸನೆಯನ್ನು ಈ ಶ್ಲೋಕಗಳು ತಿಳಿಸುತ್ತಿವೆ.

ಈ ವಿವರಣೆಯು ಪ್ರಶ್ನಾರ್ಹವಾಗಿದೆ. 'ಸಂಭೂತಿ' ಶಬ್ದವು ಹಿರಣ್ಯಗರ್ಭ ವಾಚಕವೆಂದಲ್ಲಿ ಸ್ತ್ರೀಲಿಂಗವಿರೋಧವು ಅಪರಿಹಾರ್ಯ. ನಿಷ್ಕಾರಣವಾಗಿ ಇದು ಛಾಂದಸಪ್ರಯೋಗ ಎನ್ನುವಂತಿಲ್ಲ. ಇನ್ನೂ 'ಸಂಭೂತಿಂ ಚ ವಿನಾಶಂ ಚ' ಎಂಬಲ್ಲಿ ಪ್ರಕೃತಿಯ ಸಂಗ್ರಹ ಹೇಗೆ ? 'ವಿಗತೋ ನಾಶಃ ವಿನಾಶಃ ಯಸ್ಯಾಃ ಸಾ' ಎಂಬ ವ್ಯುತ್ಪತ್ತಿಯಂತೆ ವಿನಾಶರಹಿತವಾದ ಪ್ರಕೃತಿಯನ್ನು ತೆಗೆದುಕೊಳ್ಳಬಹುದೆಂಬ ವಾದವೂ ಸೂಕ್ತವಲ್ಲ. ಆಗ 'ವಿನಾಶಂ' ಎಂಬ ನಪುಂಸಕತ್ವ ಹೇಗೆ ? ಎಂಬ ಪ್ರಶ್ನೆ ಉದ್ಭವಿಸುತ್ತದೆ.

ಅಥವಾ, 'ಸಂಭೂತಿಂ ಚ ವಿನಾಶಂ ಚ' ಎಂಬಲ್ಲಿ ಅಸಂಭೂತಿಶಬ್ದದಿಂದ ಹಿಂದೆ ಹೇಳಿದ ಪ್ರಕೃತಿಯನ್ನು ಇಲ್ಲಿಯೂ 'ಅಸಂಭೂತಿ' ಶಬ್ದದಿಂದ ಹೇಳಲಾಗಿದೆ. 'ಸಂಭೂತಿಂ ಚ ವಿನಾಶಂ' ಎಂಬಲ್ಲಿ ಅಸಂಭೂತಿ ಎಂಬುದಾಗಿ ಶಬ್ದವಿಲ್ಲ ವಾದರೂ ಅಕಾರವನ್ನೂ ಸೇರಿಸಿ, ಅನಂತರ ಪ್ರಕೃತಿಯನ್ನು ತಿಳಿಸಿದ ನಂತರ ಅವರ್ಣಕ್ಕೆ ಲೋಪವಾಗಿ 'ಸಂಭೂತಿ' ಎಂಬುದಾಗಿ ಉಳಿದಿದೆ ಎಂಬ ವ್ಯಾಖ್ಯಾನ ವಂತೂ ಆಶ್ಚರ್ಯಕರ.

ಎಲ್ಲಿಯೂ ಪ್ರಸಿದ್ಧ ವ್ಯಾಕರಣಶಾಸ್ತ್ರದಲ್ಲಿ ಇಂತಹ ಪ್ರಕ್ರಿಯೆ ಕಂಡು ಬರುವುದಿಲ್ಲ. ಇದಲ್ಲದೇ ಆತ್ಮಜ್ಞಾನಪ್ರಕರಣದಲ್ಲಿ ಪ್ರಕೃತಿ-ಹಿರಣ್ಯಗರ್ಭರ ಪ್ರಸ್ತಾವವು ಅಪ್ರಸ್ತುತವಾಗಿದೆ. ಈ ಹಿನ್ನೆಲೆಯಲ್ಲಿ ಮಾಧ್ವಭಾಷ್ಯವು ಪ್ರಮಾಣಶುದ್ಧವೂ ಪರಿಪೂರ್ಣವೂ ಆಗಿದೆ. ಅಲ್ಲಿನ ಸೂಕ್ಷ್ಮವಿಷಯಗಳನ್ನು ಶ್ರೀಕೃಷ್ಣಾವಧೂತರು ತಮ್ಮ ಟಿಪ್ಪಣಿಯಲ್ಲಿ ಸೆರೆಹಿಡಿದಿದ್ದಾರೆ. ಈ ತನಕ ಬೆಳಕು ಕಾಣದೆ ಇದ್ದ ಈ ಕೃತಿ ಪರಮಪೂಜ್ಯ ಗುರುಗಳ ಆದೇಶದಂತೆ ಪೂರ್ಣಪ್ರಜ್ಞ ಸಂಶೋಧನ ಮಂದಿರದಿಂದ ಪ್ರಕಟಿತವಾಗಿದೆ.

**ಕೃತಜ್ಞತಾಸಮರ್ಪಣೆ :**

ಸಂಶೋಧನ ಮಂದಿರದ ಅಧ್ಯಕ್ಷರೂ, ಪರಮಪೂಜ್ಯ ಗುರುಗಳೂ ಆದ ಶ್ರೀಶ್ರೀವಿಶ್ವೇಶತೀರ್ಥ ಶ್ರೀಪಾದರಿಗೆ ಭಕ್ತಿಪೂರ್ವಕ ಅನಂತ ಪ್ರಣಾಮಗಳನ್ನು ಅರ್ಪಿಸುತ್ತೇವೆ. ಒಂದೇ ಜೀರ್ಣವಾದ ಹಾಗೂ ಅಶುದ್ಧಿಭೂಯಿಷ್ಠವಾದ ಹಸ್ತಪ್ರತಿಯ ಆಧಾರದಿಂದ ಈ ಗ್ರಂಥಸಂಪಾದನೆ ನಡೆದಿದೆ. ಅಪ್ರಕಾಶಿತ ಗ್ರಂಥಗಳನ್ನು ಸುಜನರಿಗೆ ನೀಡಬೇಕೆಂಬ ಸಾತ್ವಿಕ ಕಳಕಳಿ ಇದರ ಹಿಂದಿದೆ. ಅಕ್ಷರಗಳು ಮತ್ತು ಪದಗಳು ಲುಪ್ತವಾದಲ್ಲಿ ಮತ್ತು ಅಸ್ಪಷ್ಟ ಪ್ರಸಂಗಗಳಲ್ಲಿ ತಮ್ಮ ಅಗಾಧ ಪಾಂಡಿತ್ಯ ಮತ್ತು ಸಂಶೋಧನಾನುಭವದಿಂದ ಮಾರ್ಗದರ್ಶನ ನೀಡಿ ಉಪಕರಿಸಿದವರು ಪೂಜ್ಯ ವಿದ್ಯಾರತ್ನಾಕರ ಬನ್ನಂಜೆ ಗೋವಿಂದಾಚಾರ್ಯರು. ಅವರಿಗೆ ಕೃತಜ್ಞತಾಪೂರ್ವಕ ನಮನಗಳನ್ನು ಅರ್ಪಿಸುತ್ತೇವೆ.

ರಾಷ್ಟ್ರಿಯ ಸಂಸ್ಕೃತ ಸಂಸ್ಥಾನದ ಕುಲಪತಿಗಳಾದ ಪ್ರೊ। ಕುಟುಂಬಶಾಸ್ತ್ರಿಗಳ ಮಾರ್ಗದರ್ಶನ ಪ್ರೋತ್ಸಾಹಗಳು ಅವಿಸ್ಮರಣೀಯ. ಅವರಿಗೂ ನಮ್ಮ ನಮಸ್ಕಾರಗಳು. ಗ್ರಂಥಪ್ರಕಾಶನದಲ್ಲಿ ಹೆಚ್ಚಿನ ಉತ್ತೇಜನ ನೀಡುತ್ತಿರುವ ರಾಷ್ಟ್ರಿಯ ಸಂಸ್ಕೃತ ಸಂಸ್ಥಾನದ ವಿತ್ತಾಧಿಕಾರಿಗಳಾದ ಶ್ರೀ ಸಿ.ಎಸ್. ಕನಿಯಾಲ್ ಇವರನ್ನೂ ನಾವು ಆತ್ಮೀಯತೆಯಿಂದ ಸ್ಮರಿಸುತ್ತೇವೆ.

ಈ ಕೃತಿಯ ಮುದ್ರಣಕ್ಕೆ ಅಗತ್ಯವಿರುವ ಧನಸಹಾಯವನ್ನು ಇಬ್ಬರು ಮಹನೀಯರು ಗುಪ್ತವಾಗಿ ಮಾಡಿದ್ದಾರೆ. ಆ ಈರ್ವರು ಮಹನೀಯರಿಗೂ ಭಗವಂತನ ಅನುಗ್ರಹವನ್ನು ಕೋರುತ್ತೇವೆ. ಸುಂದರವಾಗಿ ಮುದ್ರಿಸಿದ ಲಾವಣ್ಯ ಮುದ್ರಣಾಲಯದ ಅಧಿಕಾರಿವರ್ಗಕ್ಕೆ ನಾವು ಆಭಾರಿ.

**ಡಾ। ಎ.ವಿ. ನಾಗಸಂಪಿಗೆ**

**ವಿ। ಪಿ.ವಿ. ಉಪಾಧ್ಯಾಯ**

|| श्रीमते वेदव्यासाय नमः ||

# श्रीकृष्णावधूतप्रणीता याज्ञीयोपनिषत्प्रभा

यः [1](सदा शुकविख्यातं) पुत्रं प्राप महायशाः ।
तं व्यासं मम तातं च वन्दे सन्देह[2](धूतये) ॥ १ ॥

श्रीमदानन्दतीर्थार्यपादपङ्कजरेणवः ।
भवन्तु सन्ततस्वान्तध्वान्तविध्वंसहेतवः ॥ २ ॥

प्राचां सतीनां व्याख्यानां व्याख्या मे नादृता भवेत् ।
तथाऽपि बुद्धिशुद्ध्यर्थं करोम्युपनिषत्प्रभाम् ॥ ३ ॥

'सप्रश्नकठमाण्डूकमुण्डकेनेशतैत्तिरिः । छान्दोग्यं बृहदारण्यमैतरेयमिमा दश' इति साम्प्रदायिकपरिगणितक्रमेण अथात ईशोपनिषदं व्याख्यास्यामः ॥ अस्या उपनिषदः स्वायम्भुवो मनुर्ऋषिः यज्ञनामा हरिर्देवता । यथायोग्यमनुष्टुबादि छन्दः ।

'स्वायम्भुवः स्वदौहित्रं विष्णुं यज्ञाभिधं मनुः ।
ईशावास्यादिभिर्मन्त्रैस्तुष्टावावहितात्मना ॥'

इति भाष्योदाहृतब्रह्माण्डोक्तदिशा स्वायम्भुवो मनुः प्रारि-

---

१. यः सदाश्रुकविख्यातम् । 'सदाशुकविख्यातम्' इत्यस्यायमर्थः- सदा शुक इति विख्यातम् । सन् आशुकविरिति ख्यातम् । तातं च व्यासाचार्यनामानम् ।

२. भूतये

प्सितविघ्नविघाताय प्रकृतस्तुतिविषयस्य यज्ञनाम्नो [३](मूलरूपाभेदबोधिकां) वस्तुनिर्देशरूपां शान्तिं पठति- **पूर्णमद इति ॥**

पूर्णमदः पूर्णमिदं पूर्णात्पूर्णमुदच्यते ।
पूर्णस्य पूर्णमादाय पूर्णमेवावशिष्यते ॥
ओम् शान्तिः शान्तिः शान्तिः ॥

अदः मूलरूपं पूर्णं गुणैरिति शेषः । इदम् अवताररूपं च पूर्णम् । पूर्णात् मूलरूपात् पूर्णम् अवताररूपम् उदच्यते उद्गच्छति आविर्भवतीत्यर्थः । पूर्णस्य मूलरूपस्य सम्बन्धि पूर्णम् अवताररूपम् आदाय आत्मनि स्वीकृत्य एकीभूयेति यावत् । पूर्णमेव मूलरूपमेव अवशिष्यते अवतिष्ठते । तस्मान्मूलरूपाभिन्नमेवावताररूपम् । अत उभयमपि पूर्णमिति भावः । [४]शान्तिरित्युत्तरमस्त्विति शेषः । आध्यात्मिकाधिदैविकाधिभौतिकारिष्टनिरासाय त्रिरुक्तिः ।

**उपनिषत्**

**ईशावास्यमिदꣳ सर्वं यत्किञ्च जगत्यां जगत् ।**
**तेन त्यक्तेन भुञ्जीथाः मा गृधः कस्य स्विद् धनम् ॥ १ ॥**

---

३. मूलरूपादबोधिकाम्

४. शान्तिः अस्त्विति शेष इति पाठः साधुः ।

## प्रभा

अनेजदित्यादिना तत्वं विवक्षुः श्रुतिरुपदिष्टं तत्वमधिकारिण एव हृद्यवतिष्ठते नान्यस्येत्यतो विच्छिन्नविषयतृष्णावत्वरूपमधिकारं तावदाद्यमन्त्रेण सयुक्तिकमाह- **ईशावास्यमिति** ॥ जगत्यां प्रकृतौ यत्किञ्च जगत् यद्यद् भुवनं स्थावरं जङ्गमं चास्ति। इदं सर्वं जगत् ईशावास्यम्। आवासमर्हतीत्यावास्यम्। आवासशब्दादर्हार्थे यत्प्रत्ययः। यस्येति चेत्यकारलोपश्च[५]। ईशस्यावास्यम् ईशावास्यम्। प्रवृत्तय इति शेषः।

'स्वतः प्रवृत्यशक्तत्वादीशावास्यमिदं जगत्।
प्रवृत्तये प्रकृतिगं यस्मात्स प्रकृतीश्वरः।
तदधीनप्रवृत्तित्वात्तदीयं सर्वमेव यत्।
तद्दत्तेनैव भुञ्जीथा अतो नान्यं प्रयाचयेत्॥'

इति ब्राह्मोक्तेः। तेनेत्यस्याभ्यासः। तेन कारणेन तेन ईशेन त्यक्तेन दत्तेन। यदृच्छया लब्धेनेति यावत्। [६]'त्यागो विदापि

---

५. आवासशब्दात् अर्हे अर्हार्थे यत्प्रत्ययः स्यादिति तकारलोपे सकारस्थस्याकारस्य 'यस्येति च' (अष्टा. ६.४.१४८, सि.कौ. ३११) इति भस्येवर्णावर्णयोर्लोपः स्यादीकारे तद्धिते च परे लोपे आवास् य आवास्येति रूपसिद्धिः।

६. 'त्यागो विहापितं दानम्' इत्यभिधानात् इति पाठः स्यात्।

तद्दानम्' इत्यभिधानात् । भुञ्जीथाः भोजनं कुर्याः । कस्यस्वित् कस्यापि राजादेः सकाशाद् धनं मागृधः माकाङ्क्षीः ॥

अत्राद्वैतिनः आहुः- 'ईशा ईशित्रा परमेश्वरेण जगत्यां पृथिव्यां 'जगती सागराम्बरा' इत्यभिधानात् । यत्किञ्च वर्तते जगत् इदं सर्वम् वास्यम् आच्छाद्यम् । वस् आच्छादन इत्यस्माद् यप्रत्ययः । तेन कारणेन त्यक्तेन कर्मत्यागेन भुञ्जीथाः पालयेथाः । धनं मा गृधः मा काङ्क्षीः । धनमित्यभ्यासः । धनं कस्यस्वित् ? कस्य सम्बन्धि ? न कस्यापि, मिथ्येति यावत् । उत्तरमन्त्रे अज्ञं प्रति कर्मविधानाद्योग्यतया कर्मैव त्यजतेः कर्म ध्येयम् । त्यक्तेनेति त्यजतेर्भावे क्तः' इति । तन्न । जगतः ईशाच्छाद्यत्वं कुतो वक्तव्यम् । न च ज्ञानिनः कर्माकरणहेतुत्वेन । तथा हि । ज्ञानी कर्माकरणवान् सर्वस्येशाच्छाद्यत्वज्ञानाद् व्यतिरिकेणाज्ञवदित्यनुमानम् । तथा ज्ञानिनेशाच्छाद्यत्वं सर्वजगन्निष्ठमिति ज्ञाने सति कर्म न कर्तव्यमिति हेतुसाध्यसमन्वय इति वाच्यम् ।(नच तद् युक्तम् ।) 'कुर्वन्नेवेह कर्माणि' इत्युत्तरमन्त्रविरोधात् । यदि तु मन्त्रोऽयमज्ञानिपर इत्युच्यते तर्हि यस्य ब्रह्मज्ञानं नास्ति जगन्निष्ठमीशाच्छाद्यत्वमिति ज्ञानं वर्तते तस्यापि कर्माकरणप्रसङ्गः । तथा च तादृशाज्ञे व्यभिचारः । न च जगत ईशाच्छाद्यत्वं नाम ब्रह्मजगदैक्यमित्युच्यते । तथा च ब्रह्मज्ञानं विना ब्रह्मजगदैक्यज्ञानं न

भवतीति न तत्र व्यभिचार इति वाच्यम् । आच्छाद्याच्छादकयोरभेदस्यादृष्टपूर्वत्वात् । यदा पक्वज्ञानिभिरभेदो दृष्टपूर्व इति ब्रवीषि तदा

'अज्ञस्य कर्म लिप्येत कृष्णोपास्तिमकुर्वतः ।
ज्ञानिनोऽपि यतो ह्रास आनन्दस्य भवेद् ध्रुवम् ।
अतोऽलेपेऽपि लेपः स्यादतः कार्यैव सा सदा ।।'

इति नारदीयवचनेन ज्ञानिनोऽपि भगवत्पूजादिकर्मविधानात् ज्ञानी कर्मकरणवान् मुक्त्यवच्छेदेन आनन्दह्रासाभावादिति पूर्वोक्तहेतोः सत्प्रतिपक्षता ।

किञ्चेशावास्यपदेन जगदीशाभेदवादिना जगतीपदस्य पृथिवीमात्रार्थकत्वे पृथिवीस्थजगत एवेशाभेदलाभो नान्यलोकस्थजगत इत्यभेदवादविरोधाज्जगतीपदस्य लक्षणया सर्वार्थबोधकत्वं वाच्यम् । अस्माकं तु तदपेक्षया लाघवेन शक्त्यैव प्रकृत्यर्थकत्वे सर्वस्यापि प्रकृत्याश्रितत्वेनेशावास्यत्वलाभः । न हि धनस्य मिथ्यात्वं वक्तव्यम् । प्रत्यक्षविरोधात् । अर्थक्रियाकारित्वाच्च । न च भुजधातोः पालनार्थकत्वम् । 'भुजोऽनवने' (अष्टा. १.३.३६) इति सूत्रेण पालनभिन्नार्थकस्यैव भुजधातोरात्मनेपदित्वविधानेन भुञ्जीथा इत्यात्मनेपदविरोधादिति ।। इदं सर्वमित्यत्र 'रेफोष्मपर' इति

सूत्रेणोष्मपरत्वादनुस्वारस्यानुनासिकत्वम् । एवमग्रेऽप्यनेन सूत्रेणानुस्वारस्यानुनासिकत्वं ध्येयम् ॥ १ ॥

## उपनिषत्

**कुर्वन्नेवेह कर्माणि जिजीविषेच्छतꣳ समाः ।**
**एवं त्वयि नान्यथेतोऽस्ति न कर्म लिप्यते नरे ॥ २ ॥**

## प्रभा

अथ तृष्णाविच्छेदवत्स्वोचितकर्मानुष्ठानमपि ज्ञानार्थिनां ज्ञानिनां चावश्यकमित्याह- **कुर्वन्नेवेति** ॥ इह मानुषादिजन्मनि शतं समाः शतवर्षाणि । 'कालाध्वनो:' (अष्टा. २.३.५) इत्यादिना द्वितीया । समानलिङ्गकस्थलीयविशेष्यविशेषणयोरभेदसंसर्गकशाब्दबुद्धिं प्रति समानवचनकत्वस्य तन्त्रत्वेन नात्र विभिन्नवचनकत्वं दोषः । आमरणमिति यावत् । जिजीविषेज्जीवितुमिच्छेच्चेत् कर्माणि स्वोचितकर्माणि कुर्वन्नेव जीवेदिति शेषः । जीवतेः सन्नन्ताल्लिङ् । एवं चेत् नरे मनुष्यमात्रे अल्पाधिकारिण्यपीति यावत् । त्वयि कर्म पापात्मकं न लिप्यते । इतः कर्मकरणात् अन्यथा । कर्माकरण इति यावत् । न कर्म लिप्यत इत्यस्याभ्यासः । कर्म पापं न लिप्यत इति नास्ति । लिप्यत एवेत्यर्थः । तथा च मनुष्यादिजन्मनि यावज्जीवति नरस्तावत्कालमसङ्कल्पितफलानि स्वोचितकर्माणि कुर्वन्नेव जीवेत् । एवं

चेदल्पाधिकारिणमपि तं [७](प्रागुत्तराण्यपि) पापानि न [८](बाधन्ते) नो चेज्ज्ञानिनोऽपि पापलेपोऽस्त्येवेति भावः । अत्र प्रमाणम् 'अज्ञस्य' इत्यादिनारदीयवचनम् ।

अत्राद्वैतिनः- न केवलं तृष्णाविच्छेदोऽधिकारः किन्तु स्वोचितकर्मानुष्ठानेन जीवनेच्छाऽपीत्याह- **कुर्वन्नेवेति** ॥ इह मानुषादिजन्मनि कर्माणि स्वोचितानि कुर्वन्नेव शतं समाः शतवर्षाणि जिजीविषेत् जीवितुमिच्छां कुर्वीत । जीवतेः सनन्ताद्विधिलिङ् । अथेत्थं करणे फलमित्थमकरणे प्रत्यवायं चाऽऽह- **एवमिति** ॥ 'नीचसम्बोधने रे स्यात्' इत्यभिधानाद् 'रे' इति अज्ञसम्बोधनम् । रे अज्ञ एवं चेत् कर्मकरणपूर्वक-जीवनमिच्छसि चेत् त्वयि कर्म पापं न लिप्यते । अन्यथा इतः युक्तः अर्थात्कर्मलेपेनेति शेषः । इण् गतावित्यस्मात्कर्मणि क्तः । नास्तीति न वर्तत एवेत्यर्थ इत्याहुः । तदसङ्गतं मन्यामहे । न हि पक्वमभ्यवहरामीतीच्छामात्रेण क्षुच्छान्तिर्भवति । तथा कर्माकृत्वा कर्मकरणपूर्वकजीवनेच्छायाः पापलेपाभावकारणत्वं विरुद्धम् । किञ्च न - रे इति पदं विभज्य रे इत्यस्य सम्बोधकत्वं च न घटते । 'सम्बोधने चाल्प' इति सूत्रेणाल्पसम्बोधने उदात्तविधानाद् 'अन्ते चाधिकरणस्य' इति सूत्रादधिकरणबोधकसप्तमीप्रत्ययवतो

---

७. प्रागुक्तान्यपि ८. बन्धन्ते

वाक्यान्ते स्थितस्य गुरोः स्वरितविधानेनात्र स्वरितस्यैव श्रूयमाणत्वात् । उदात्त इति पूर्वाधिकारेणाल्पविषयकसम्बोधने उदात्तः स्वरो भवति । चात् कारकद्वितीयायामप्युदात्तः स्यात् । अल्पे किम् । 'अग्ने नय' इत्यत्रानुदात्तः । 'भो ब्रह्मन्' इत्यत्र प्लुतश्चेति 'सम्बोधने चाल्प' इति सूत्रार्थः । स्वरित इत्यधिकारेण गुरोरिति पूर्वसूत्रानुवृत्या च अधिकरणार्थकसप्तमीप्रत्ययवतो वाक्यान्ते स्थितस्य गुरोः स्वरितः स्यात् । चात् वाक्यान्ते स्थितस्य प्रथमाद्वितीयाषष्ठीप्रत्ययवतो गुरोः स्वरित इति ग्राह्यम् । अन्ते किम् । 'जगत्यां जगत्' 'सर्वभूतेषु चात्मानम्' इत्यादिषु माभूदिति 'अन्ते चाधिकरणस्य' इति सूत्रार्थः ।

यत्त्वयं मन्त्रो अज्ञपर इति । तदपि न । सकलश्रुत्यर्थनिर्णयाय प्रवृत्तानां पुराणादीनां प्रामाण्येन निरुक्तनारदीयवाक्ये भगवदुपासनादिस्वोचितकर्मकरणस्य ज्ञान्यज्ञानिविषयकत्वोक्त्या तद्विरोधात् । अत एव 'नियमाच्च' (ब्र.सू. ३.४.७) इति सूत्रभाष्यादौ मन्त्रोऽयं ज्ञानिपरतयोदाहृत इति ॥ २ ॥

### उपनिषत्

**असुर्या नाम ते लोका अन्धेन तमसाऽऽवृताः ।**
**तां स्ते प्रेत्याभिगच्छन्ति ये के चात्महनो जनाः ॥ ३ ॥**

## प्रभा

अथाधिकारिणं प्रति परमात्मतत्वबुभुत्साजननाय परमात्मानं याथार्थ्येनाविदां निन्दामाह- **असुर्या इति** ॥ सुष्ठु रमणं सुर्यम् । सुपूर्वाद् 'रमु क्रीडायाम्' इत्यस्माद् भावे यप्रत्ययः । न विद्यमानं सुर्यं येष्वित्यसुर्याः । यद्वा सुष्ठु रमणं सुर्यं तन्न भवतीत्यसुर्यं दुःखम् असुर्यम् एष्वस्तीत्यसुर्याः । [९]अर्शादित्वान्मत्वर्थश्यच् । अत्र न विद्यमानः सुर्यः सूर्यप्रकाशो येष्वित्यसुर्याः । सुत्वं छान्दसमिति केचित् । तन्न । भाट्टास्तु 'सुरा तु चषके मद्ये स्त्रियां पुंस्यर्कदेवयोः' इत्यभिधानात्सुरप्राप्याः सुर्यास्ते न भवन्तीत्यसुर्या इत्यनेनैव सूर्यप्रकाशराहित्यार्थलाभे सुर्यपदस्य प्रकाशे लक्षणोक्तिः सुत्वस्य छान्दसत्वोक्तिश्चानुचितेति । तदपि न समञ्जसम् । 'अन्धेन तमसाऽऽवृताः' इत्यनेनैव [१०]सूर्यप्रकाश(राहित्या)र्थलाभे असुर्यपदवैय्यर्थ्यात् । न चानयोर्हेतुहेतुमद्भावो विवक्ष्यते । तथा च लोकाः अन्धेन तमसाऽऽवृताः असुर्यत्वादिति वाच्यम् । यत्र सूर्यप्रकाशो नास्ति मण्यादिप्रकाशो वर्तते तत्र व्यभिचारात् । न च नायं हेतुहेतुमद्भावो विवक्षितः । किन्तु अन्धतमसावृतत्वस्य हेतुत्वमसुर्यत्वस्य साध्यत्वं विवक्ष्यत इति वाच्यम् । अन्धतमसावृतत्वोक्त्या अर्थाद्दुःखसाधनमिति वक्तव्ये असुर्यत्वसाधने

---

९. अर्शआदित्वान्मत्वर्थीयोऽच् इति पाठः साधुरिति भाति ।

१०. सूर्यप्रकाशार्थलाभे

प्रयोजनाभावात् । अथवा 'महादुःखैकहेतुत्वात्प्राप्यत्वादसुरैस्तथा । असुर्या नाम ते लोकास्तान् यान्ति विमुखा हरौ' इति वामनोक्त्या असुर्यपदस्य सूर्यप्रकाशराहित्यार्थकत्वे एतद् वचनविरोधः । यद्यस्य वचनस्यैतच्छ्रुत्यर्थप्रतिपादकत्वमस्तीत्यर्थे [११]नियमाभावात्कथं विरोध इति ब्रवीषि तर्हि एतमेव मन्त्रं मूलीकृत्य प्रवृत्ते 'न च रमन्त्यहो असदुपासनयाऽत्महन' इति भागवतवचने (१०.९४. २३) 'न च रमन्ति' इत्यनेनासुर्यपदार्थवर्णनस्य कृतत्वात् चशब्दस्य महादुःखमनुभवन्तीत्यर्थसमुच्चायकत्वेनासुर्यपदस्य सुखा-भावपूर्वकमहादुःखहेतुत्वार्थकत्वोक्त्या तस्य सूर्यप्रकाशराहित्यार्थ-कत्वे तद्विरोध इत्यलं पल्लवेन ।

ते प्रसिद्धाः अन्धेन अन्धयतीत्यन्धं तेनातिनिबिडेन तमसा आवृताः ये लोकाः सन्ति तान् लोकान् ये के च जनाः ये ये जनाः आत्मानं ब्रह्म घ्नन्तीत्यात्महनः । हननं च मिथ्याज्ञानेन यथा-स्थितब्रह्मस्वरूपतिरस्कारः । विपरीतज्ञानिन इति यावत् । ते जनाः प्रेत्य मृत्वा अभिगच्छन्ति प्राप्नुवन्ति । नामेति निश्चये । ये के चेति नियमार्थे । 'नियमेन तमो यान्ति सर्वेऽपि विमुखा हरौ' इत्युक्तेः ये विपरीतज्ञानिनस्ते सर्वेऽपि तान् लोकान्नियमेन यान्तीति भावः ॥ ३ ॥

---

११. नियामकाभावात् इति पाठः साधुरिति भाति ।

## उपनिषत्

अनेजदेकं मनसो जवीयो
नैनद् देवा आप्नुवन् पूर्वमर्षत् ।
तद् धावतोऽन्यानत्येति तिष्ठत्
तस्मिन्नपो मातरिश्वा दधाति ॥ ४ ॥

## प्रभा

अथ तत्वमुपदिशति- **अनेजदित्यादिमन्त्रद्वयेन । अनेजत् ।** 'अनेजन्निर्भयत्वात्' इत्युक्तेर्निर्भयत्वादकम्पमानम् । न तु निष्क्रियत्वात् । तथात्वे 'मनसो जवीय' इति वाक्यविरोधः । न च 'मनसो जवीय' इत्यादिषु सोपाधिकस्य ब्रह्मणः प्रतिपाद्यत्वं निष्क्रियत्वप्रतिपादकस्थले निरुपाधिकस्य ब्रह्मणः प्रतिपाद्यत्वमङ्गीक्रियत इति वाच्यम् । अस्मदुक्तरीत्या एकस्यैव ब्रह्मणः प्रतिपाद्यत्वसम्भवे ब्रह्मणो द्वैविध्यं परिकल्प्य तदुभयप्रतिपादकत्वरूपामुख्यार्थकथने गौरवात् ।

न च कार्यताबोधकपदोपेतेष्वेव गामानयेत्यादिषु वाक्येष्वन्वय परिसमाप्तेर्दर्शनात्केवलसिद्धार्थबोधकेषु 'घटपटकटा' इत्यादिषु [१२](तददर्शनादस्य) चानेजदिति वाक्यस्य केवलपरब्रह्मरूपसिद्धार्थ बोधकत्वादन्वयापरिसमाप्तिर्दोषस्तद्धारणाय सोपाधिकत्वनिरु-

१२. तद्दर्शनात् अस्य

पाधिकत्वभेदेनाज्ञसिद्धस्य ब्रह्मणः बोधकत्वमवश्यमङ्गीकर्तव्य-मिति वाच्यम् । 'इयं माता' इत्यादौ केवलसिद्धार्थबोधनेनैव वाक्यपरिसमाप्तेर्दर्शनादत्र तु स्वप्रधाने ब्रह्मण्येव तात्पर्यात् ।

**एकमिति** । 'एकं प्राधान्यतस्तथा' इत्युक्तेः प्रधानमित्यर्थः । न तु द्वितीयवस्तुराहित्यादेकम् । 'यस्तु सर्वाणि भूतानि' इति मन्त्रविरोधात् । 'मनसोऽपि जवीयः' वेगवत्तरम् । 'एनत्' ब्रह्म देवाः नाप्नुवन् साकल्येन न व्यजानन् । 'सम्यग्ज्ञातुमशक्य-त्वादगम्यं तत्सुरैरपि' इति वचनात् । न तु सर्वथा वाङ्मनसा-गोचरत्वात् 'नैनद्देवा आप्नुवन्' इति । 'यस्मिन् सर्वाणि' इति मन्त्रविरोधात् । पूर्वं स्वभावतोऽनादि ब्रह्म, एनदित्यावृत्तिः । एनत् देवादिजगत् अर्षत् व्यजानात् । ऋष ज्ञाने इत्यस्माल्लङ् । अडागमाभावश्छान्दसः । 'अचिन्त्यशक्तितश्चैव सर्वगत्वाच्च तत्परम् । द्रवतोऽत्येति सन्तिष्ठत्' इति वचनात् तत् ब्रह्म धावतः अन्यान् जनान् अत्येति अतिक्रम्य वर्तते ।

अत्रेत्थमद्वैत्याशङ्क्य समाधत्ते- ननु सर्वस्यापि ब्रह्मस्वरूपतया ब्रह्मातिरिक्ताभावेन कथं ब्रह्म अन्यानत्येतीति चेन्न । 'अन्यान्' इत्यस्याज्ञानकल्पितान्यान् इत्यर्थविवक्षणादिति । तन्न । 'याथा-तथ्यतोऽर्थान्' इत्युत्तरमन्त्रविरोधात् । मातरिश्वा मुख्यवायुः तस्मिन् हरौ आसमन्तात् पालयन्तीत्यापः कर्माणि ।

पकारान्तमिदम् । शब्दस्वाभाव्यान्नित्यं स्त्रीत्वं बहुत्वं च । दधाति समर्पयति । मुख्यप्राणः स्वप्रेरणया प्राणिभिः क्रियमाणानि पुण्यकर्माणि परब्रह्मणि हरौ समर्पयतीति भावः । 'तस्मिन् कर्माण्यधान्मरुत्' इतिवचनात् ॥ ४ ॥

## उपनिषत्

**तदेजति तन्नेजति तद् दूरे तद्वन्तिके ।**
**तदन्तरस्य सर्वस्य तदु सर्वस्यास्य बाह्यतः ॥ ५ ॥**

## प्रभा

**तदेजतीति** ॥ अव्ययमिदं ततूपञ्चम्यर्थे । जगदिति कर्त्रध्याहारेण तत् तस्माद्ब्रह्मणः जगत् एजति बिभेतीत्यर्थः । न तु तदिति प्रथमार्थे अङ्गीकृत्य तत् ब्रह्म एजति बिभेति चलति वेत्यर्थो वक्तव्यः । 'तन्नेजती'त्युत्तरवाक्येन व्याघातात् । न च 'तदेजति' इत्यस्य ब्रह्म चेष्टत इत्यर्थस्तन्नेजतीत्यस्य ब्रह्म न बिभेतीत्यर्थ इति वाच्यम् । 'तद्धावतोऽन्यानत्येती'त्यनेन पौनरुक्त्यात् । न च 'तदेजति तन्नेजती'त्यस्य ब्रह्म बिभेति न बिभेतीत्यर्थकरणे व्याघातो दोषोऽस्माकम् । भवतां तु जगदिति कर्त्रध्याहारो दोषः। एवं साम्ये मदुक्त एवार्थः किं न स्यादिति वाच्यम् । एजतीत्युक्ते किमित्याकाङ्क्षायां शाब्दी ह्याकाङ्क्षा शब्देनैव शाम्यतीति न्यायेन

